Chandamama, Aug. '54 | Photo by Anant Desai



ಬಹುಮಾನ
ಪಡೆದ ಶೀರ್ಷಿಕೆ

ಒಡಲ ಹುಟ್ಟು

ಕಳಿಸಿದವರು:
ಕೆ. ರಾಮರಾವ್

*

## ಈ ಸಂಚಿಕೆಯಲ್ಲಿ



ಇವಲ್ಲದೆ ಚಿತ್ರಕಥೆ, ಪದ್ಯಗಳು ಎಲ್ಲಾ ಇವೆ.

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

---

ಸ್ವಾತಂತ್ರ್ಯಲಾಭವೆಂಬ ಬೆಲೆಯಿಲ್ಲದ ಮಾಣಿಕ್ಯವು ದೊರಕಿದ ಸ್ಮಾರಕ ಮಾಸವೇ ಆಗಸ್ಟ್. ಈ ಸಮಯದಲ್ಲಿ ನಾವು ನಿಮಗೆ ಕೊಡುವ ಸಂದೇಶವೇನೆಂದರೆ: ಪ್ರತಿ ಅಲ್ಪವಸ್ತುವನ್ನಾಗಲೀ ಅಲ್ಪವೆಂದು ನಿರಾಕರಿಸಿ ಬಿಡಬೇಡಿ. ಸಂಗ್ರಹ ಮಾಡಿಕೊಳ್ಳುವುದಕ್ಕಿಂತಲೂ ಸಂಗ್ರಹಿಸಿದ್ದನ್ನು ಹಿತವಾಗಿ ಮಿತವಾಗಿ ವಿನಿಯೋಗಿಸುವುದರಲ್ಲಿ ಚಾಕಚಕ್ಯತೆಯಿದೆ. ಅಲ್ಪವಸ್ತುವಿನಲ್ಲಿ ಅಡಗಿರುವ ಅಕ್ಷಯತೆಯನ್ನು ನಿರೂಪಿಸುವ 'ಮನೆಯ ಆಡಳಿತ' ಕತೆಯ ತತ್ವವನ್ನು ಗ್ರಹಿಸಿರಿ. 'ಮನೆಗೆದ್ದು ಮಾರುಗೆಲ್ಲಬೇಕು' ಎಂದು ಹಿರಿಯರು ಹೇಳುವ ಮಾತಿನ ಅರ್ಥವೂ ಇದೇ ಆಗಿದೆ. ಸಣ್ಣವರಾದ ನೀವು ಸಣ್ಣ ಸಣ್ಣ ವಿಷಯಗಳನ್ನು ಯೋಚಿಸಿಕೊಳ್ಳುತ್ತಾ ದೊಡ್ಡವರಾಗಿರಿ. ಇನ್ನು ನಮ್ಮ 'ಕಟ್ಟುಬಲ್ಲವರಿಗೆ' ಸ್ಪರ್ಧೆಯಲ್ಲಿ ಭಾಗವಹಿಸಿದವರಲ್ಲಿ ಕೆಲವರು ಚೆನ್ನಾಗಿಯೇ ಬರೆದಿದ್ದಾರೆ. ಅವುಗಳನ್ನು ಮುಂದೆ ಯಥಾವಕಾಶವಾಗಿ ಒಂದು ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ.

---

ಸಂಪುಟ ೧೩ : ಆಗಸ್ಟು ೧೯೬೪ : ಸಂಚಿಕೆ ೨





CHITRA




# ಅಲೆಗ್ಝಾಂಡರ್ - ಸಿಂಹ

ಈಗೀಲೋಕವ ನಡುನಡುಗಿಸುವ
ಆಟಂಬಾಂಬಿನ ಹಾಗಿದ್ದ,
ಅಲೆಗ್ಝಾಂಡರನ ಕಥೆ ಕೇಳಿದರೆ
ಈ ಕಥೆ ಕೇಳ್ದಂತೇ ಸಿದ್ಧ.

ಯಾವ ಮಹಾಕವಿ ಎಂದೋ ಹೇಳಿದ
ನೀತಿ ಕಟ್ಟುಕಥೆ ಇಂದಿಗಿದೆ
ಎಂದೋ ಹೇಳಿದ ಮಾತಿದಾದರೂ
ಇಂದು ಕೇಳಿದರು ಒಳ್ಳೆದಿದೆ.

"ಎಲ್ಲರ ಸ್ವಾತಂತ್ರ್ಯವ ಕಬಳಿಸುವ
ಅಲೆಗ್ಝಾಂಡರೆಂಬನೋಘ ಬಲವಾನ್
ಹುಟ್ಟಿದನಯ್ಯೋ! ಮುಂದೇನ್ಗತಿಯೋ!
ಏನ್ ಗೈಯುವನೋ–ಆ ಪ್ರತಾಪವಾನ್!

ಮನುಜ ಮೃಗಂಗಳ್ ಹಕ್ಕಿ ಹುಳಂಗಳ್,
ಎಲ್ಲ ಪ್ರಾಣಿಗಳ್ ಬರಬೇಕಂತೆ;
ಅವನಧಿಕಾರವ ಶಿರಸಾವಹಿಸಲು
ಹಾಜರಾಗಲವ ನಾಣತಿಯಂತೆ"

ಎಂಬೀ ಪುಕಾರು ಊರೂರು ಹರಡಿ,
ಎಲ್ಲಿ ನೋಡಿದರು ಕಲ್ಲೋಲ.
ಕಂಡರಿಯದ ಆ ನಾಥನ ಬಳಿಗೆ
ಹೊರಡುವಪರಿ ಗಂದರಗೋಳ!

ಪ್ರಾಣಿಗಳೆಲ್ಲಾ ಸಭೆ ಸೇರಿದುವು
ಸಂಶಯ ಚರ್ಚೆಯ ಮಾಡಿದುವು.
ಹೊಸ ಪ್ರತಾಪಿಗೇ ಶರಣಾಗುವುದೇ
ಒಳಿತೆನ್ನುತೆ ನಿಶ್ಚಯಿಸಿದುವು.

## "ಮಾರಂಗ"

ನರನಿಗೆ ನೆರೆಯುವ ವಾನರನೆನ್ನುತ
ಕೋತಿಯು ದೂತನ ಮಾಡಿದುವು.
ಮನುಜಗೆ ಮುಖ್ಯವು ಧನವೆಂದೆಣಿಸುತೆ
ಮಣಿಯು ಗಣಿಗಳನೆ ಅಗೆಸಿದುವು.

ಆನೆ ಒಂಟೆ ಕುದುರೆ ಕತ್ತೆಗಳು
ಧನಮಣಿ ಸಂಚಿಗಳನು ಹೊತ್ತು
ನಡೆಯಲು ಮುಂದೆ ಅವುಗಳ ಹಿಂದೆ
ಬಾಲದವೊಲು ಮಂಗವು ಹೋಯ್ತು.

ಹೀಗಾ ಮೃಗಗಳ ದಂಡಿನ ಪಯಣ
ಮೃಗೇಂದ್ರನಾ ಗವಿಬಳಿ ಸಾಗಲ್,
ಕಂಡು ಮೃಗೇಂದ್ರನು ಗರ್ಜನೆ ಮಾಡಿದ:
"ಎಲವೋ ಕೋತಿಯೆ ನಿಲ್ ನಿಲ್ ನಿಲ್!

ಸಂಚಿಗಳೆಲ್ಲಾ ಇಲ್ಲಿಳಿಸು" ಎನಲ್
ಪಾಪ ಕೋತಿ ಗಪುಚಿಪ್ಪಾಗಿ
ಧನಮಣಿಗಳ ಸಿಂಹಕೇ ಸಮರ್ಪಿಸಿ
ಅಲೆಗ್ಜಾಂಡರನ ಬಳಿ ಸಾಗಿ,

ನಡೆದ ಪರಿಯನೆಲ್ಲವನು ನಿವೇದಿಸಿ
ಕ್ಷಮಿಸಬೇಕೆಂದು ಪ್ರಾರ್ಥಿಸಿತಂತೆ.
ಆಲೆಗ್ಜಾಂಡರನು ಕೋಪವ ತಾಳಿ
ಮೃಗಗಳ ದಂಡಿಸಿದನು ಅಂತೆ!

ಸಿಂಹ-ಅಲೆಗ್ಜಾಂಡರುಗಳ ಪಂಥದಿ
ಪ್ರಾಣಿಕೋಟಿಗೇ ಕುತ್ತಾಯ್ತು.
ಉಭಯೋದ್ಧಂಡರು ಢೀಕೊಂಡಾಗ
ನಡುವೆ ದೀನರಿಗೆ ಆಪತ್ತು!








ಹಿಂದೆ ಬ್ರಹ್ಮದತ್ತನು ಕಾಶೀನಗರವನ್ನು ಆಳುತ್ತಿದ್ದ ಕಾಲದಲ್ಲಿ ಬೋಧಿಸತ್ವನು ಒಬ್ಬ ಬ್ರಾಹ್ಮಣ ಕುಮಾರನಾಗಿ ಜನಿಸಿದನು. ಆ ಹುಡುಗನಿಗೆ ಸ್ವಲ್ಪ ತಿಳುವಳಿಕೆ ಬರುವ ವೇಳೆಗೆ ಅವನಿಗೊಬ್ಬ ತಮ್ಮ ಹುಟ್ಟಿದನು.

ಕೆಲಕಾಲದನಂತರ ತಂದೆತಾಯಿಗಳು ತೀರಿಕೊಂಡರು. ಆದುದರಿಂದ ಜೀವನದಲ್ಲಿ ವಿರಕ್ತಿ ಹೊಂದಿ ಸಹೋದರರಿಬ್ಬರೂ ಗಂಗಾ ನದಿಯ ಆಚೆದಡದಲ್ಲೊಬ್ಬನೂ, ಈಚೆದಡದಲ್ಲೊಬ್ಬನೂ ಕುಟೀರಗಳನ್ನು ಕಟ್ಟಿಕೊಂಡು ಸನ್ಯಾಸಿಗಳಂತೆ ಜೀವಿಸುತ್ತಿದ್ದರು. ಒಂದು ದಿನ ಪಾತಾಳಲೋಕದಲ್ಲಿದ್ದ ಸರ್ಪರಾಜನಾದ ಮಣಿಕಾಂತನು ಮಾನವರೂಪತಾಳಿ ಭೂಲೋಕಕ್ಕೆ ಬಂದು, ಗಂಗಾ ನದಿತೀರದಲ್ಲಿ ಅಡ್ಡಾಡುತ್ತಿದ್ದನು. ಹಾಗೆ ಹೋಗುತ್ತಿರಲು ಆತನಿಗೆ ಕಿರಿಯವನ ಕುಟೀರ ಕಾಣಿಸಿತು. ಆತನು ಅಲ್ಲಿಗೆ ಹೋಗಲು, ಕಿರಿಯವನು ಆತನನ್ನು ಆದರಿಸಿದನು. ತುಸ ಹೊತ್ತಿಗೆಲ್ಲಾ ಅವರಿಬ್ಬರೂ ಆಪ್ತಮಿತ್ರರಾದರು.

ಅಂದಿನಿಂದ ಕಿರಿಯವನಲ್ಲಿಗೆ ಮಣಿಕಾಂತನು ಪದೇಪದೇ ಹೋಗಿ ಬರುತ್ತಿದ್ದನು. ಅವರಿಬ್ಬರೂ ದಿನಗಟ್ಟಲೆ ಹಾಗೇ ಸಂತೋಷವಾಗಿ, ಉಲ್ಲಾಸದಿಂದ ಮಾತನಾಡುತ್ತಾ ಕಾಲಕಳೆಯುತ್ತಿದ್ದರು. ಅಷ್ಟೇ ಅಲ್ಲ; ಮಣಿಕಾಂತನು ತನ್ನ ನಿಜಸ್ವರೂಪವನ್ನು ತಾಳಿ, ಕಿರಿಯವನ ತಲೆಯಮೇಲೆ ತನ್ನ ಹೆಡೆಯನ್ನು ಕೂಡ ಆಡಿಸುವನು.

'ಸರ್ಪರಾಜನ ಗೆಳೆತನ ಹೆಮ್ಮೆಪಡುವಂತಹುದೇ ಆದರೂ ಅವನದು ದುಷ್ಟಸ್ವಭಾವ. ಎಂದಾದರೂ ಅವನಿಂದ ಪ್ರಾಣಾಪಾಯ ವುಂಟಾಗಬಹುದು' ಎಂದು ಕಿರಿಯವನ ಮನಸ್ಸಿನಲ್ಲಿ ಚಿಂತೆಮೂಡಿತು.

ಈ ಸ್ಥಿತಿಯಲ್ಲಿ ಒಂದು ದಿನ ಅವನು ತನ್ನ ಅಣ್ಣನ ಹತ್ತಿರಕ್ಕೆ ಹೋಗಲು ಆತನು ಆಶ್ಚರ್ಯಗೊಂಡು "ಇದೇನು ತಮ್ಮಾ, ಇಷ್ಟು ಸೊರಗಿ ಹೋಗಿರುವೆ? ನಿನ್ನ ಗೌರವರ್ಣವೇ ಬದಲಾಯಿಸಿದೆಯಲ್ಲಾ" ಎಂದು ಪ್ರಶ್ನೆ ಮಾಡಿದ. ಗತ್ಯಂತರವಿಲ್ಲದೆ ಕಿರಿಯವನು ಎಲ್ಲ

ಹೆಚ್. ನಾರಾಯಣರಾವು

ವಿಷಯವನ್ನು ಮುಚ್ಚು ಮರೆಯಿಲ್ಲದೆ ಅಣ ನೊಂದಿಗೆ ಹೇಳಿದ. ಅಣ್ಣನು ಎಲ್ಲ ವಿಷಯ ವನ್ನೂ ಕೇಳಿ "ಈಗ ಹೇಳು, ಮಣಿಕಾಂತನು ನಿನ್ನ ಹತ್ತಿರ ಬರಬೇಕೋ ಬೇಡವೋ? ಯಾವುದೋ ಒಂದು ಹೇಳು" ಎಂದ.

"ಬೇಡ" ಎಂದ ಕಿರಿಯವನು.

"ಸರಿ. ಆ ಸರ್ಪರಾಜನು ನಿನ್ನ ಹತ್ತಿರ ಬರುವಾಗ ಏನೇನು ಆಭರಣಗಳನ್ನು ಧರಿಸಿ ಕೊಂಡು ಬರುತ್ತಾನೆ?" ಎಂದು ಮತ್ತೆ ಕೇಳಿದ ಅಣ್ಣ.

"ಧಗಧಗ ಮೆರೆಯುವ ಮಣಿ" ಎಂದ ಕಿರಿಯವ.

"ಭೇಷ್. ಸೊಗುಸಾಗಿದೆ. ಈ ಸಾರಿ ನಿನ್ನ ಹತ್ತಿರ ಬಂದು ಆದರಪೂರ್ವಕವಾಗಿ ಮಾತನಾಡುತ್ತಿರುವ ಸಂದರ್ಭದಲ್ಲಿ ಆ ಮಣಿ ನಿನಗೆ ಬೇಕೆಂದು ಕೇಳು. ಮುಂದೇನು ನಡೆಯುವುದೋ ನೋಡು" ಎಂದು ಹೇಳಿದ.

"ಹಾಗೇ ಮಾಡುತ್ತೇನೆ" ಎಂದು ಹೇಳಿ ಕಿರಿಯವನು ತನ್ನ ಕುಟೀರಕ್ಕೆ ತೆರಳಿದ.

ಮಾರನೇಯ ದಿನ ಮಣಿಕಾಂತನು ಕುಟೀರದೊಳಕ್ಕೆ ಬಂದ. ಕಿರಿಯವನು ಮಣಿ ಬೇಕೆಂದು ಸರ್ಪರಾಜನನ್ನು ಕೇಳಿದ. ಆ ಮಾತನ್ನು ಕೇಳಿ ಕುಳಿತುಕೊಳ್ಳದೆಯೇ ಮಣಿ ಕಾಂತ ತನ್ನ ಲೋಕಕ್ಕೆ ಹಿಂತಿರುಗಿದ. ಎರಡ ನೇಯ ದಿನ ಮತ್ತೆ ಮನೆಗೆ ಬಂದ ಮಣಿ ಕಾಂತ. ಹೊಸ್ತಿಲಿನ ಹತ್ತಿರ ನಿಂತಿರುವಾಗಲೇ ಕಿರಿಯವನು "ನಿನ್ನೆಯೇ ಕೇಳಿದ್ದೆ ಮಣಿ



ಕೊಡಲಿಲ್ಲ; ಇಂದಾದರೂ ಕೊಡುವೆಯಾ?" ಎಂದು ಕೇಳಲು, ಮಣಿಕಾಂತನು ಕುಟೀರ ದೊಳಗೆ ಕಾಲಿಡದೆಯೇ ಹೊರಟುಹೋದ.

ಮಾರನೇಯ ದಿನ ಸರ್ಪರಾಜನು ಮತ್ತೆ ಬಂದಿರುವುದನ್ನು ಕಂಡು, ಎಷ್ಟುಸಾರಿ ಕೇಳಿ ದರೂ ಮಣಿ ಕೊಡಲಿಲ್ಲ. ಈಗಲಾದರೂ ಕೊಡುವೆಯಾ?" ಎಂದು ನಿರ್ದಾಕ್ಷಿಣ್ಯವಾಗಿ ಕೇಳಿದ. ಸರ್ಪರಾಜನು ಮುಂದೆ ಒಂದು ಹೆಜ್ಜೆಯನ್ನಾದರೂ ಇಡಲಿಲ್ಲ. ನಿಂತಲ್ಲಿಯೇ ನಿಂತುಕೊಂಡು "ಎಲೈ ತರುಣನೇ, ಈ ಮಣಿ ಸಾಮಾನ್ಯವಾದುದಲ್ಲ. ನಾನು ಕೋರಿದು ದನ್ನು ಕೊಡುವ ಕಾಮಧೇನು. ನನ್ನ ಕೋರಿಕೆ ಗಳನ್ನು ತೀರಿಸುವ ಕಲ್ಪವೃಕ್ಷ. ಇಂತಹ ಮಹತ್ತಾದುದನ್ನು ನೀನು ಕೇಳಿದರೆ ನಾನು




ಕೊಡಲು ಹೇಗೆ ಸಾಧ್ಯ? ಆದುದರಿಂದ ನಿನ್ನ ಹತ್ತಿರಕ್ಕೆ ಇನ್ನುಮುಂದೆ ಬರುವುದೇ ಇಲ್ಲ." ಎಂದು ಹೇಳಿ ಮಣಿಕಾಂತನು ಅಲ್ಲಿಂದ ಹೊರಟುಹೋದನು. ಮತ್ತೆಂದೂ ಕಿರಿಯವನ ಕಣ್ಣಿಗೆ ಆತನು ಬೀಳಲಿಲ್ಲ.

ಈಗ ಕಿರಿಯವನಿಗೆ ಮತ್ತೊಂದು ದೊಡ್ಡ ಸಮಸ್ಯೆ ಎದುರಾಯಿತು. ಇಷ್ಟುದಿನ ಆಪ್ತ ಮಿತ್ರನಂತೆ ಇದ್ದ ಮಣಿಕಾಂತನು ಒಮ್ಮಿಂದೊಮ್ಮೆಗೇ ಕಾಣಿಸದಿರಲು ಆತನಿಗೆ ಒಂದು ರೀತಿ ವ್ಯಥೆ ಆಯಿತು. ಹಿಂದಿಗಿಂತಲೂ ಈಗ ಹೆಚ್ಚು ಸವೆದುಹೋಗುತ್ತಿದ್ದನು. ಶರೀರವೆಲ್ಲಾ ಅಸ್ಥಿಪಂಜರದಂತೆ ಬಡಕಲಾಯಿತು.

ಇಷ್ಟರಲ್ಲಿ ಒಂದು ದಿನ ತಮ್ಮನನ್ನು ವಿಚಾರಿಸಿಕೊಂಡು ಬರಲು ಅಣ್ಣನು ಬಂದ. ತಮ್ಮನನ್ನು ಕಂಡು ಆಶ್ಚರ್ಯಗೊಂಡು "ಹೋದ ಸಲಕ್ಕಿಂತಲೂ ತುಂಬಾ ಇಳಿದುಹೋಗಿರುವೆಯಲ್ಲೋ ತಮ್ಮಾ. ನಾನು ಹೇಳಿದಂತೆ ಮಾಡಿದೆಯಾ?" ಎಂದು ಕೇಳಿದ.

ಆದಕ್ಕೆ ಕಿರಿಯವನು "ಅಣ್ಣಾ, ನೀವು ಹೇಳಿದಂತೆಯೇ ಮಾಡಿದೆ. ಅಂದಿನಿಂದ ಸರ್ಪರಾಜನು ಇತ್ತಕಡೆ ಬರುವುದನ್ನೇ ನಿಲ್ಲಿಸಿದ. ಮಣಿಕಾಂತನು ಬಂದು ನನ್ನೊಂದಿಗೆ ತುಸ ಹೊತ್ತು ಮಾತನಾಡಿ, ನನ್ನ ತಲೆಯಮೇಲೆ ತನ್ನ ಹೆಡೆಯನ್ನು ಬಿಚ್ಚಿ ಆಡಿಸಿದಹೊರತು ಕಾಲಕಳೆಯುವುದೇ ಕಷ್ಟಕರವಾಗಿದೆ. ಆತನು ನನ್ನ ಸ್ನೇಹವನ್ನು ತ್ಯಜಿಸಿದಾಗಲಿಂದ ನನಗೆ ಹುಚ್ಚು ಹಿಡಿದಂತಾಗಿದೆ" ಎಂದ.

ಆಗ ಅಣ್ಣನಾದ ಬೋಧಿಸತ್ವನು ಹೀಗೆಂದ: "ಎಲೈ ತಮ್ಮನೇ, ಸರ್ಪರಾಜನು ನಿನ್ನ ಗೆಳೆಯನೆಂದು ಹೇಳಿಕೊಂಡು ಹೆಮ್ಮೆಪಡುತ್ತಿದ್ದೆ. ಆದರೆ ಮಣಿ ಕೇಳಿದಕೂಡಲೇ ಆತನು ನಿನ್ನ ಸಮೀಪಕ್ಕೆ ಬರಲೇ ಇಲ್ಲ. ಇದೆಯೇ ಸ್ನೇಹಲಕ್ಷಣ? ನೀನು ಇಟ್ಟ ಸಣ್ಣದೊಂದು ಪರೀಕ್ಷೆಗೆ ನಿಲ್ಲಲಾರದಾತನು ಸ್ವಾರ್ಥಪರನೇ ಹೊರತು ನಿಜವಾದ ಮಿತ್ರನಲ್ಲ. ಆದುದರಿಂದ ನೀನು ಕಳವಳಪಡಬೇಡ. ಚಿಂತೆಗೊಳ್ಳದಿರು." ಈ ರೀತಿ ಹಿತವಚನ ನುಡಿದು ತನ್ನ ಕುಟೀರಕ್ಕೆ ಹೊರಟುಹೋದ.

ಅಣ್ಣನ ಹಿತವಚನದ ಅಂತರ್ಯವನ್ನು ಅರಿತು, ಕಿರಿಯವನು ಅಂದಿನಿಂದ ಸರ್ಪರಾಜನನ್ನು ಜ್ಞಾಪಿಸಿಕೊಳ್ಳುವುದನ್ನು ನಿಲ್ಲಿಸಿದ.




# ಅಪೂರ್ವ ವಸ್ತು

**ಭ**ವಾನಿನಗರದಲ್ಲಿ ಜಯವರ್ಮನೆಂಬ ಒಬ್ಬ ಧನಿಕನಿದ್ದನು. ಆತನಿಗೆ ಜಯಪಾಲ, ವಿಜಯಪಾಲ ಮತ್ತು ಸಜಯಪಾಲರೆಂಬ ಮೂವರು ಪುತ್ರರಿದ್ದರು. ಆ ಮೂವರಿಗೂ ವಯಸ್ಸಿನಲ್ಲಿಯೂ, ರೂಪರೇಖೆಗಳಲ್ಲಿಯೂ, ವಿದ್ಯೆ ವಿನಯಗಳಲ್ಲಿಯೂ ಭಾರಿ ವ್ಯತ್ಯಾಸವಿರಲಿಲ್ಲ.

ನಿಜವಾಗಿ ಆ ಸಹೋದರರು ತುಂಬಾ ಬುದ್ಧಿವಂತರು. ಪರಸ್ಪರ ಪ್ರಿತಿಯಿಂದ ಇದ್ದರು. ಅವರ ನಡುವೆ ರಹಸ್ಯಗಳೇ ಇರಲಿಲ್ಲ. ಆದರೆ ಒಂದು ವಿಷಯವನ್ನು ಮಾತ್ರ ಅವರು ಒಬ್ಬರೊಂದಿಗೊಬ್ಬರು ಹೇಳಿದುದೇ ಇಲ್ಲ. ಅದೇನೆಂದರೆ ಅವರು ಮೂವರೂ ಭವಾನಿನಗರದ ರಾಜಕುಮಾರಿಯನ್ನು ಪ್ರೇಮಿಸಿದ್ದರು. ಆಕೆಯನ್ನು ಹೇಗಾದರೂ ಮದುವೆ ಮಾಡಿಕೊಳ್ಳಬೇಕೆಂದು ಮೂವರೂ ತಮ್ಮ ತಮ್ಮಲ್ಲೇ ತೀರ್ಮಾನಿಸಿಕೊಂಡಿದ್ದರು.

ಅವರು ಮೂವರೂ ಪ್ರತಿ ಸಾಯಂಕಾಲ ಅರಮನೆಯ ಪಕ್ಕದಲ್ಲಿರುವ ಉದ್ಯಾನವನಕ್ಕೆ ಹೋಗುತ್ತಿದ್ದರು. ಅವರು ಹೋಗುವ ವೇಳೆಗೆ ರಾಜಕುಮಾರಿ ನಿರುಪಮಾದೇವಿ ರಾಜಭವನದ ಉಪ್ಪರಿಗೆಯ ಮೇಲೆ ವಿಹಾರಮಾಡುತ್ತಿರುವುದು ಅವರ ಕಣ್ಣಿಗೆ ಕಾಣಿಸುವುದು. ಒಂದೊಂದು ದಿನ ಆಕೆ ವೀಣೆ ನುಡಿಸುತ್ತಾ ಸಂಧ್ಯಾರಾಗವನ್ನು ಆಲಾಪನೆಮಾಡುವುದು ಕೇಳುತಿತ್ತು. ಆದರೆ ಆ ಸಹೋದರರು ಮಾತ್ರ ರಾಜಕುಮಾರಿಯನ್ನು ಕುರಿತು ಪರಸ್ಪರ ಚರ್ಚೆಮಾಡಿದ್ದೇ ಇಲ್ಲ.

ಹೀಗೇ ಕಾಲಕಳೆಯುತ್ತಿರಲು ಒಂದು ದಿನ ಜಯವರ್ಮನು ತನ್ನ ಮೂವರು ಕುಮಾರರನ್ನು ಹತ್ತಿರಕ್ಕೆ ಬರಮಾಡಿಕೊಂಡು "ಮಕ್ಕಳೇ, ನಾನು ವೃದ್ಧನಾದೆ. ನಾನು ಗಳಿಸಿರುವ ಹಣದಿಂದ ನೀವು ಸುಖವಾಗಿ ಜೀವನವನ್ನೇನೋ ಮಾಡಬಹುದು. ಆದರದು ಪುರುಷಲಕ್ಷಣವಲ್ಲ. ನಿಮಗೆ ವಿವಾಹವಾಗುವ ವಯಸ್ಸು ಪ್ರಾಪ್ತವಾಗಿದೆ. ಮದುವೆಯಾದನಂತರ ಬೇರೆ ಬೇರೆ ಸಂಸಾರಗಳಾಗುತ್ತವೆ. ಮಕ್ಕಳು ಮರಿ ಆಗುತ್ತವೆ. ಕ್ರಮೇಣ ಹಣ ಕರಗಿಹೋಗುತ್ತದೆ. ಆದು

ಕುಮಾರಿ ಸರಳಾ



ದರಿಂದ ನೀವು ಪುರುಷಧರ್ಮಾನುಸಾರವಾಗಿ ದೇಶಸಂಚಾರ ಮಾಡಿ ಧನ ಗಳಿಸಿಕೊಂಡು ಬನ್ನಿ. ಅನಂತರ ಗೃಹಸ್ಥಾಶ್ರಮದಲ್ಲಿ ಪ್ರವೇಶಿಸಿ" ಎಂದು ಹೇಳಿದನು.

ಪಿತೃವಾಕ್ಯಪರಿಪಾಲಕರಾದ ಆ ಯುವಕರು ತಂದೆ ಹೇಳಿದ ಈ ಸೂಕ್ತ ಸಲಹೆಯನ್ನು ಶಿರಸಾವಹಿಸಿ, ಶುಭಮುಹೂರ್ತದಲ್ಲಿ, ಸ್ವಲ್ಪ ಹಣದೊಂದಿಗೆ ಮನೆಬಿಟ್ಟು ಉತ್ತರದಿಕ್ಕಿನ ಕಡೆ ಹೊರಟರು. ಒಂದು ದಿನವೆಲ್ಲಾ ನಡೆಯಲು ಅವರಿಗೆ ಮಹಾವಟವೆಂಬ ಒಂದು ನಗರ ಸಿಕ್ಕಿತು. ಅದೊಂದು ಭಾರಿ ಸಂತೆಸೇರುವ ಸ್ಥಳ.

ಆ ಸಂತೆಯಲ್ಲಿ ಅಣ್ಣತಮ್ಮಂದಿರು ತಮಗೆ ಬೇಕುಬೇಕಾದ ಸಾಮಾನುಗಳನ್ನು ಕೊಂಡುಕೊಂಡರು. ಅಂದು ಶಿವರಾತ್ರಿ. ಮಾರನೇಯ ದಿನ ಬೆಳಗ್ಗೆ ಹೊರಟು ಮೂವರೂ ಮೂರು ದಿಕ್ಕಿಗೆ ಹೋಗಿ ಮತ್ತೆ ಮುಂದಿನವರ್ಷ ಶಿವರಾತ್ರಿಯಂದು ಈ ಮಹಾವಟದ ಸಂತೆಯಲ್ಲಿ ಭೇಟಿಯಾಗಬೇಕೆಂದು ತೀರ್ಮಾನಿಸಿದರು.

ಮುಂದೆ-ವಾರಗಳೂ, ತಿಂಗಳುಗಳೂ, ಕಳೆದವು. ಶಿವರಾತ್ರಿಮತ್ತೆ ಬಂದಿತು. ಮಹಾವಟದ ಸಂತೆಯಲ್ಲಿ ವ್ಯಾಪಾರ ತುಂಬಾ ಬಿರುಸಾಗಿ ನಡೆಯುತ್ತಿದೆ. ಅಪೂರ್ವವಾದ ವಸ್ತುಗಳೆಷ್ಟೋ ಆ ವರ್ಷ ಸಂತೆಗೆ ಬಂದಿದ್ದುವು. ಎಲ್ಲರಿಗಿಂತಲೂ ಕಿರಿಯವನಾದ ಸುಜಯನು ತಾವು ಹಿಂದೆ ನಿರ್ಧರಿಸಿದ ಪ್ರಕಾರ ಸಂತೆಗೆ ಬಂದ. ಕಳೆದ ವರ್ಷ ಆತನು ಯಥೇಚ್ಛವಾಗಿ ಹಣಗಳಿಸಿದ. ಆದುದರಿಂದ ತನ್ನ ಅಣ್ಣಂದಿರು ಬರುವವೊದಲೇ ತನ್ನ ಹತ್ತಿರವಿರುವ ಹಣದಲ್ಲಿ ಸ್ವಲ್ಪ ಖರ್ಚುಮಾಡಿ ಯಾವುದಾದರೊಂದು ಅಪೂರ್ವವಸ್ತುವನ್ನು ಕೊಂಡುಕೊಳ್ಳಬೇಕೆಂದು ಮನಸ್ಸಾಯಿತು.

ಆದರೆ ಅವುಗಳಲ್ಲಿ ಒಂದೇ ಒಂದು ಆತನ ಮನಸ್ಸನ್ನು ಆಕರ್ಷಿಸಿತು. ಅದೊಂದು ನಿಂಬೆಹಣ್ಣು. ಅದು ಸಾಮಾನ್ಯನಿಂಬೆಹಣ್ಣುಗಳಂತೆ ಅಲ್ಲ. ಯಾರು ಎಂತಹ ಭಯಂಕರವಾದ ವ್ಯಾಧಿಯಿಂದ ನರಳುತ್ತಿದ್ದರೂ ಸಹ, ಆ ಹಣ್ಣನ್ನು ಕೊಯ್ದು ಬಾಯಲ್ಲಿ ರಸ ಹಿಂಡಿದರೆ ತಕ್ಷಣ ವ್ಯಾಧಿ ಗುಣವಾಗುವುದು. ಸಾವಿರ ಹೊನ್ನುಗಳನ್ನು ಕೊಟ್ಟು ಆ ನಿಂಬೆಯನ್ನು ಕೊಂಡುಕೊಂಡು, ಸುಜಯನು ತನ್ನ

ಸಹೋದರರಿಗಾಗಿ ಹುಡುಕಾಡುತ್ತ ಅಲ್ಲಿದ್ದ. ಅಂದೇ ವಿಜಯನೂ ಸಹ ಅಲ್ಲಿಗೆ ಬಂದ. ಆತನಿಗೂ ವ್ಯಾಪಾರದಲ್ಲಿ ತುಂಬಾ ಲಾಭ ಬಂದಿತ್ತು. ಆತನೂ ಸಂತೆಯಲ್ಲಿ ಒಂದು ಅಪೂರ್ವವಾದ ವಸ್ತುವನ್ನು ಸಾವಿರ ಹೊನ್ನುಗಳನ್ನು ಕೊಟ್ಟು ಕೊಂಡುಕೊಂಡ. ಅದು ಒಂದು ತಿವಾಸಿ. ಅದು ತುಂಬಾ ಮಹತ್ತಾದುದು. ಅದರ ಮೇಲೆ ಕುಳಿತು ಎಲ್ಲಿಗೆ ಹೋಗಬೇಕೆಂದು ನೆನೆಸಿದರೆ ಅಲ್ಲಿಗೆ ಕ್ಷಣಮಾತ್ರದಲ್ಲಿ ಹೋಗ ಬಹುದು.

ಹಿರಿಯವನಾದ ಜಯಪಾಲನೂ ಸಹ ಅಂದೇ ಹಿಂತಿರುಗಿದ. ವ್ಯಾಪಾರಮಾಡಿ ಆತನು ಬೇಕಾದಷ್ಟು ಹಣಗಳಿಸಿದ್ದ. ಆತನೂ ಅನೇಕ ವಸ್ತುಗಳನ್ನು ವ್ಯಾಪಾರ ಮಾಡಿದ. ಕೊನೆಗೆ ಚಿಕ್ಕದೊಂದು ಅಂಗಡಿಯಲ್ಲಿ ಒಂದು ಕನ್ನಡಿ ಕಾಣಿಸಿತು. ಅದರ ಬೆಲೆ ಸಾವಿರ ವರಹಗಳೆಂದು ಹೇಳಿದ ಆ ಅಂಗಡಿಯಾತ.

"ಈ ಸಾಮಾನ್ಯವಾದ ಕನ್ನಡಿಗೆ ಸಾವಿರ ವರಹಗಳೆಂದರೇನು? ಇದರಲ್ಲಿ ವಿಶೇಷವೇನಿದೆ?" ಎಂದು ಕೇಳಿದ ಜಯಪಾಲ.

"ಅಯ್ಯಾ, ಇದು ಸಾಧಾರಣ ಕನ್ನಡಿಯಲ್ಲ. ಯಾರನ್ನೇ ಆಗಲಿ ನೆನೆಸಿಕೊಂಡು ಈ ಕನ್ನಡಿಯಲ್ಲಿ ನೋಡಿದರೆ ಅವರು ಆ ಕ್ಷಣದಲ್ಲಿ ಹೇಗಿರುವರೋ ಹಾಗೇ ಕಾಣಿಸುತ್ತಾರೆ" ಎಂದ ಅಂಗಡಿಯಾತ.

ಜಯಪಾಲನ ಮನಸ್ಸು ತಟಕ್ಕನೆ ನಿರುಪಮಾದೇವಿಯ ಮೇಲೆ ಹೋಯಿತು. ಆಕೆಯನ್ನು ನೋಡಬೇಕೆಂದು ಆತನಿಗೆ ಅಭಿಲಾಷೆ ಆಯಿತು. ಆತನು ಸಂಕೋಚಪಡದೆ ಕೂಡಲೇ ಅಂಗಡಿಯವನು ಕೋರಿದಷ್ಟು ಹಣವನ್ನು ಕೊಟ್ಟು, ಆ ಕನ್ನಡಿ ತೆಗೆದುಕೊಂಡ. ನಿರುಪಮಾದೇವಿಯನ್ನು ನೆನೆಸಿಕೊಂಡು ಕನ್ನಡಿಯಲ್ಲಿ ನೋಡಿದ. ಮರು ಕ್ಷಣವೇ ಆತನಿಗೆ ಸಹಿಸಲಾರದಷ್ಟು ಸಂಕಟವಾಗಿ, ಹೃದಯ ಭಾರವಾಯಿತು. ಏಕೆಂದರೆ ಆ ಕನ್ನಡಿಯಲ್ಲಿ ರಾಜಕುಮಾರಿ ಏನೋ ಕಾಣಿಸಿದಳು. ಆದರಾಕೆ ಮರಣೋನ್ಮುಖ ಸ್ಥಿತಿಯಲ್ಲಿದ್ದಾಳೆ. ರಾಜವೈದ್ಯನು ಆಕೆಯ ನಾಡಿಯನ್ನು ಪರೀಕ್ಷಿಸಿ, ಜೋಲುಮೋರೆ ಹಾಕಿಕೊಂಡಿದ್ದಾನೆ. ಆಕೆಯ ಪ್ರಾಣ ಕೆಲವೇ ಕ್ಷಣಗಳು ಮಾತ್ರ ಉಳಿಯುವಂತಿದೆ. ಆದರೆ






ತಾನು ಅಲ್ಲಿಗೆ ಹೋಗಿ ಸೇರಬೇಕೆಂದರೆ ಒಂದು ದಿನ ಪ್ರಯಾಣ ಮಾಡಬೇಕು. ಅಷ್ಟರೊಳಗೆ ಎಲ್ಲವೂ ಮುಗಿದುಹೋಗಿರುತ್ತದೆ!

ಅತೀವ ವೇದನೆಯಿಂದ ಜಯಪಾಲನು ಅಂಗಡಿಯನ್ನು ದಾಟಿ ಸ್ವಲ್ಪದೂರ ಬಂದನೋ ಇಲ್ಲವೋ ವಿಜಯನು ಆತನಿಗೆದುರಾಗಿ "ಅಣ್ಣಾ" ಎಂದು ಮಾತನಾಡಿಸಿದ.

ಜಯಪಾಲನು ಸ್ವಲ್ಪ ಚೇತರಿಸಿಕೊಂಡು "ಇಲ್ಲಿ ನೋಡು ವಿಜಯಾ" ಎಂದ ಆತನು ರಾಜಕುಮಾರಿಯ ದುಸ್ಥಿತಿಯನ್ನು ಆತನಿಗೆ ತೋರಿಸಿದನು. ಹಾಗೆ ತೋರಿಸಿದನಂತರ "ಈ ಆಪತ್ತಿನ ಸಮಯದಲ್ಲಿ ನಾವಿಷ್ಟು ದೂರದಲ್ಲಿರುವೆವು. ಅದೇ ನನಗೆ ಬಹಳ ಚಿಂತೆಯಾಗಿದೆ" ಎಂದ. "ಅಣ್ಣಾ, ನೀನೇನೂ ಹೆದರಬೇಡ" ಎಂದು ಹೇಳಿ ತನ್ನ ಕಂಕುಳಲ್ಲಿದ್ದ ತಿವಾಸಿಯನ್ನು ನೆಲದಮೇಲೆ ಹಾಸಿ, "ಇದರಮೇಲೆ ಕುಳಿತ ಮರುಕ್ಷಣವೇ ನಾವು ರಾಜಕುಮಾರಿಯ ಮರಣಶಯ್ಯೆಯ ಹತ್ತಿರ ಹೋಗಬಹುದು" ಎಂದ. ಅವರಿಬ್ಬರೂ ತಿವಾಸಿಯ ಮೇಲೆ ಆಸೀನರಾಗುವ ವೇಳೆಗೆ "ಅಣ್ಣಂದಿರಾ" ಎಂದು ಸುಜಯನು ಅಲ್ಲಿಗೆ ಬಂದ.

"ಮಾತನಾಡಲು ಸಮಯವಿಲ್ಲ. ತಿವಾಸಿಯ ಮೇಲೆ ಕುಳಿತುಕೊ. ಕೊನೆಯಸಾರಿ ನಿರುಪಮಾದೇವಿಯನ್ನು ನೋಡೋಣ" ಎಂದ ವಿಜಯ.

ಮರುಕ್ಷಣವೇ ಆ ಮೂವರೂ ನಿರುಪಮಾದೇವಿಯ ಮರಣಶಯ್ಯೆಯ ಪಕ್ಕದಲ್ಲಿದ್ದರು.

ಸುಜಯನು ತನ್ನಹತ್ತಿರವಿದ್ದ ನಿಂಬೆಹಣ್ಣನ್ನು ಕೊಯಿದು ರಸವನ್ನು ಆಕೆಯ ಬಿಳಿಚಿಕೊಂಡಿದ್ದ ತುಟಿಗಳ ಮಧ್ಯೆ ಹಿಂಡಿದ.

ಕೇವಲ ಕೆಲವೇ ನಿಮಿಷಗಳಲ್ಲಿ ರಾಜಕುಮಾರಿಯಲ್ಲಿ ವರ್ಣನಾತೀತವಾದ ಬದಲಾವಣೆಯುಂಟಾಯಿತು. ಆಕೆಯ ಮುಖದಲ್ಲಿ ಕಾಂತಿಗೆಲುವುಗಳು ಕಾಣಿಸಿದವು. ಕೆಲವು ಕ್ಷಣಗಳಲ್ಲಿ ಆಕೆ ಕಣ್ಣು ತೆರೆದು ಉತ್ಸಾಹದಿಂದ ಎದ್ದು ಕುಳಿತುಕೊಂಡಳು. ಅಲ್ಲಿದ್ದವರೆಲ್ಲಾ ಆನಂದಾಶ್ರುಗಳನ್ನು ಸುರಿಸಿದರು.

ರಾಜಕುಟುಂಬದವರ ಆನಂದಕ್ಕಿಂತಲೂ ರಾಜನ ಕೃತಜ್ಞತೆಯು ಕಟ್ಟೆಯೊಡೆದು ಪ್ರವಹಿಸಿತು. ಆತನು ಆ ಮೂವರು ಸಹೋ

ದರರ ಕೈಗಳನ್ನೂ ಹಿಡಿದುಕೊಂಡು "ಮಕ್ಕಳೇ, ನೀವು ನನ್ನ ಮಗಳನ್ನು ಬದುಕಿಸಲು ಸ್ವರ್ಗದಿಂದ ಅವತರಿಸಿ ಬಂದ ದೇವತೆಗಳೇ ಹೊರತು ಮಾನವಮಾತ್ರರಲ್ಲ. ನೀವು ನನ್ನ ಅರಮನೆಯಲ್ಲೇ ಇದ್ದು, ನನ್ನ ಮಗಳ ವಿವಾಹ ಮುಗಿಯುವ ವರೆವಿಗೂ ನನ್ನ ಆತಿಥ್ಯವನ್ನು ಸ್ವೀಕರಿಸಬೇಕು" ಎಂದ. ಆ ಸಹೋದರರು ಅದಕ್ಕೆ ಸಮ್ಮತಿಸಿದರು.

ಆದರೆ ಒಂದು ಬಿಕ್ಕಟ್ಟು ಬಂತು. ತನ್ನ ಮಗಳ ರೋಗವನ್ನು ಗುಣಪಡಿಸುವಾತನಿಗೆ ಆಕೆಯನ್ನು ಕೊಟ್ಟು ವಿವಾಹಮಾಡುವೆನೆಂದು ರಾಜನು ಡಂಗುರ ಸಾರಿಸಿದ್ದ. ಆ ಪ್ರಕಾರ ಆ ಮೂವರಲ್ಲಿ ಯಾರಿಗೆ ತನ್ನ ಮಗಳನ್ನು ಕೊಟ್ಟು ವಿವಾಹಮಾಡಬೇಕೋ ನಿರ್ಧರಿಸುವಂತೆ ಮಂತ್ರಿಗೆ ಆಜ್ಞೆಮಾಡಿದ.

ಆದರೆ ಮೂವರ ಕಥೆಯನ್ನು ಕೇಳಿದ ನಂತರ ಮಂತ್ರಿ ಸಂದಿಗ್ಧದಲ್ಲಿ ಸಿಲುಕಿದ. ಆ ಮೂವರಲ್ಲಿ ಯಾರು ರಾಜಕುಮಾರಿಯ ಪ್ರಾಣ ಕಾಪಾಡಿದರು?

ಜಯಪಾಲನು ಕನ್ನಡಿಯಲ್ಲಿ ನೋಡದಿದ್ದರೆ ನಿರುಪಮಾದೇವಿಯ ರೋಗದ ವಿಷಯ ಅವರಿಗೆ ತಿಳಿಯುತ್ತಿರಲಿಲ್ಲ. ವಿಜಯನ ತಿವಾಸಿಯಿಲ್ಲದಿದ್ದರೆ ಅವರು ಆ ಸಮಯಕ್ಕೆ ಸರಿಯಾಗಿ ಬರಲಾಗುತ್ತಿರಲಿಲ್ಲ. ಸುಜಯನ ನಿಂಬೆಹಣ್ಣು ಇಲ್ಲದಿದ್ದರೆ ಆಕೆಯ ರೋಗ ಗುಣವಾಗುತ್ತಿರಲಿಲ್ಲ! ಎಂದು ಯೋಚಿಸಿ, "ರಾಜಕುಮಾರಿಯನ್ನು ಯಾರು ಮದುವೆ




ಯಾಗಬೇಕೋ ನೀವೇ ಹೇಳಿಬಿಡಿ" ಎಂದು ಹೇಳಿದ ಮಂತ್ರಿ. ಎಂದೂ ಜಗಳವಾಡದ ಆ ಸಹೋದರರು, 'ನಾ ನಾಕೆಯನ್ನು ಮದುವೆಯಾಗಬೇಕು', ನಾ ನಾಕೆಯನ್ನು ವಿವಾಹವಾಗಬೇಕು' ಎಂದು ಬಲವಾಗಿ ವಾದಿಸಲು ಪ್ರಾರಂಭಿಸಿದರು.

"ಮಹಾಪ್ರಭೂ, ಇದು ತಾರ್ಕಿಕರಿಂದ ಹೊರತು ಬೇರೊಬ್ಬರಿಂದ ಹೇಳಲು ಸಾಧ್ಯವೇ ಇಲ್ಲ. ಒಂದು ಸಭೆ ಏರ್ಪಾಟುಮಾಡಿ, ಪ್ರಸಿದ್ಧ ತಾರ್ಕಿಕರನ್ನು ಕರೆಯಿಸಿ. ಈ ಸಮಸ್ಯೆಯನ್ನು ಅವರ ಮುಂದಿಡೋಣ"

ಎಂದು ಮಂತ್ರಿ ಹೇಳಲು, ರಾಜನು ಆ ಸಲಹೆಯೇ ಸರಿಯೆಂದು ಅಂಗೀಕರಿಸಿದ. ಕೆಲ ದಿನಗಳಲ್ಲೇ ಸಭೆ ಏರ್ಪಾಟಾಯಿತು.

ಜನಗಟ್ಟಳೆ ವಾದವಿವಾದಗಳಾದರೂ ಸಮಸ್ಯೆ ಬಗೆ ಹರಿಯಲಿಲ್ಲ. ವಿಷಯು ಇದ್ದ ಸ್ಥಳದಲ್ಲೇ ಇದೆ! ಕೊನೆಗೆ ರಾಜಕುಮಾರಿ ನಿರುಪಮಾದೇವಿ ಈ ವಿಷಯದಲ್ಲಿ ತಲೆ ಹಾಕಿದಳು. ಈ ಸಮಸ್ಯೆ ಬಗೆ ಹರಿಸುವ ಮಾರ್ಗವನ್ನು ಸೂಚಿಸಲು ತನಗೂ ಅವಕಾಶ ಕೊಡಬೇಕೆಂದು ಅವಳು ಸವಸ್ಯರನ್ನು ಕೇಳಿ ಕೊಂಡಳು.

"ತಾವು ಪರಿಷ್ಕರಿಸಲಾಗದ ಸಮಸ್ಯೆಯನ್ನು ರಾಜಕುಮಾರಿ ಪರಿಷ್ಕರಿಸುವಳೊ?" ಎಂದು ಆ ತಾರ್ಕಿಕರು ಸಂಶಯ ಗೊಂಡರು.

"ನೀವೆಲ್ಲರೂ ತಪ್ಪುದಾರಿಯಲ್ಲಿ ಆಲೋಚಿಸುತ್ತಿರುವಿರೆಂದು ನನಗೆ ತೋರುತ್ತಿದೆ. ನನ್ನ ಪ್ರಾಣ ಕಾಪಾಡಲು ಈ ಮೂವರಲ್ಲಿ ಯಾರು ಹೆಚ್ಚು ಬಾಧ್ಯರೆಂಬ ವಿಷಯವನ್ನು ನೀವು ಈಗ ತರ್ಕಮಾಡುತ್ತಿರುವಿರಿ. ನಿಜ ಹೇಳಬೇಕೆಂದರೆ ಮೂವರೂ ಸಮಬಾಧ್ಯರೇ. ಆದರೆ ಒಂದು ಮುಖ್ಯವಿಷಯ. ಯಾರು ನನಗಾಗಿ ಹೆಚ್ಚು ತ್ಯಾಗಮಾಡಿದರು ಎಂಬ ಈ ವಿಷಯವನ್ನುಮಾತ್ರ ನೀವೆಲ್ಲರೂ ಉಪೇಕ್ಷೆ ಮಾಡಿರುವಿರಿ. ಜಯಪಾಲನ ಕನ್ನಡಿ, ವಿಜಯಪಾಲನ ತಿವಾಸಿ, ಸುಜಯನ ನಿಂಬೆಹಣ್ಣು, ಮೂರೂ ನನಗೆ ಪ್ರಾಣದಾನ ಮಾಡಲು ಸಹಾಯವಾದವು. ಆದರೆ ಜಯಪಾಲನ ಕನ್ನಡಿ ಜಯಪಾಲನ ಹತ್ತಿರವಿದೆ. ಅದರಿಂದ ಆತನು ಇತರರನ್ನು ನೋಡಬಹುದು. ವಿಜಯಪಾಲನ ತಿವಾಸಿ ಆತನ ಹತ್ತಿರವೇ ಇದೆ. ಅದರಮೇಲೆ ಕುಳಿತು ಆತನು ಎಲ್ಲಿಗೆ ಬೇಕಾದರೂ ಹೋಗಬಹುದು. ಆದರೆ ಸುಜಯನ ನಿಂಬೆಹಣ್ಣು ವ್ಯಯವಾಯಿತು. ಅದರಿಂದ ಆತನು ಮತ್ತೆ ಯಾರನ್ನೂ ಬದುಕಿಸಿಕೊಳ್ಳಲಾರನು. ಈಗ ನನಗೆ ಪತಿಯಾಗಲು ಅರ್ಹರಾರೆಂಬುದನ್ನು ನೀವೇ ನಿರ್ಣಯಿಸಿರಿ" ಎಂದಳು ರಾಜಕುಮಾರಿ.

ನಿರುಪಮಾದೇವಿಯ ಬುದ್ಧಿ ಸೂಕ್ಷ್ಮತೆಗೆ ಎಲ್ಲರೂ ಹರ್ಷಚಕಿತವಾದರು. ಆಕೆಗೂ ಸುಜಯಪಾಲನಿಗೂ ಅತಿ ವೈಭವವಾಗಿ ವಿವಾಹವಾಯಿತು. ಅವರಿಬ್ಬರೂ ಬಹಳ ಕಾಲ ಸುಖವಾಗಿ ಜೀವನ ಸಾಗಿಸುತ್ತಿದ್ದರು.






ಅರೇಬಿಯಾ ದೇಶದ ಒಂದು ಗ್ರಾಮದಲ್ಲಿ ಆಲಿ ಮಹಮದ್ ಎಂಬಾತನೊಬ್ಬನಿದ್ದನು. ಆತನದು ಬಹಳ ಸಾಧು ಸ್ವಭಾವ. ಆದುದರಿಂದ ಆತನು ಅಮಾಯಕನೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು.

ಒಂದುದಿನ ಮಿತ್ರರಿಬ್ಬರು ಆತನೊಂದಿಗೆ ದೆವ್ವಗಳಿವೆ ಎಂದು ವಾದಿಸಿದರು, ದೆವ್ವ, ಭೂತ ಮುಂತಾದುವೇನೂ ಇಲ್ಲವೆಂದು ಆಲಿ ಮಹಮದ್ ಹೇಳಿದ. "ಊರಿನ ಪಶ್ಚಿಮದಲ್ಲಿರುವ ಬೆಟ್ಟದಮೇಲೊಂದು ಆಲದ ಮರವಿದೆ. ಅದರಲ್ಲಿ ಅನೇಕ ದೆವ್ವಗಳಿವೆ" ಎಂದು ಸಾಧಿಸಿದರು ಆಲಿಯ ಸ್ನೇಹಿತರು.

"ಅದೆಲ್ಲಾ ಬರೀ ಸುಳ್ಳು" ಎಂದ ಆಲಿ.

"ಸುಳ್ಳೆಂದು ಹೇಳುವುದು ಬಲು ಸುಲಭ. ಒಂದು ಅಮಾವಾಸ್ಯೆಯ ರಾತ್ರಿಯನ್ನು ನೀನೊಬ್ಬನೇ ಆ ಮರದ ಕೆಳಗೆ ಕಳೆಯಬಲ್ಲೆಯಾ?" ಎಂದರು ಮಿತ್ರರು.

"ನನಗೇನೂ ಭಯವಿಲ್ಲ" ಎಂದ ಆಲಿ.

"ಹಾಗಾದರೆ ನಾಳೆ ಅಮಾವಾಸ್ಯೆ. ನಾಳೆ ರಾತ್ರಿಯೆಲ್ಲಾ ಗಾಢಾಂಧಕಾರದಲ್ಲಿ ಬೆಟ್ಟದ ಮೇಲಿರುವ ಆಲದಮರದ ಕೆಳಗೆ ಇರು. ನೀನು ಯಾವೊಂದು ಅಸಾಹುತಕ್ಕೂ ಈಡಾಗದೆ ಕಳೆದೆಯೆಂದರೆ ನಿನಗೆ ಮೃಷ್ಟಾನ್ನ ಭೋಜನವಿಡುತ್ತೇವೆ. ಹಾಗಿಲ್ಲದ ಪಕ್ಷಕ್ಕೆ ನೀನು ನಮಗೆ ಭರ್ಜರಿ ಊಟ ಹಾಕಿಸಬೇಕು" ಎಂದರು ಆಲಿಯ ಮಿತ್ರರು.

ಆಲಿ ಅದಕ್ಕೆ ಒಪ್ಪಿಕೊಂಡ. ಮಾರನೆಯ ದಿನ ಹೇಸರ ಕತ್ತೆಗಳಮೇಲೆ ಮೂವರು ಗೆಳೆಯರೂ ಬೆಟ್ಟದಮೇಲಕ್ಕೆ ಹೋದರು. ಹೊತ್ತುಮುಳುಗುವ ಸಮಯಕ್ಕೆ ಆಲಿಯನ್ನು ಆ ಆಲದಮರದ ಕೆಳಗೆಬಿಟ್ಟು, ಆತನ ಕತ್ತೆಯೊಂದಿಗೆ ಮಿತ್ರರಿಬ್ಬರೂ ತಮ್ಮ ಗ್ರಾಮಕ್ಕೆ ಹಿಂತಿರುಗಿದರು.

ಆಗ ಆಲಿಯನ್ನು ಕುರಿತು "ನಾವು ಹೇಳಿದ ನಿಯಮಗಳೆಲ್ಲವನ್ನೂ ಪಾಲಿಸಬೇಕು. ನಾಳೆ ಬೆಳಗ್ಗೆ ಬರುತ್ತೇವೆ. ಅದುವರೆವಿಗೂ ನೀನು ಜೀವಂತ ಇದ್ದರೆ ನಾವು ಮತ್ತೆ ಜೊತೆಗಿರೋಣ" ಎಂದರು.

ಜಿ. ವೆಂಕಟಸುಬ್ಬ




ಆರದಿರುವುದನ್ನು ಗಮನಿಸಿದ ಆಲಿ. ಆ ಕೊಠಡಿಯಲ್ಲಿ ಯಾರು ಎಚ್ಚರವಾಗಿರುವರೊ, ಏಕೆ ಎಚ್ಚರವಾಗಿರುವರೋ ಎಂದು ಯೋಚನೆ ಮಾಡುತ್ತಾ ಚಳಿ ಮತ್ತು ಹಸಿವನ್ನು ಮರೆಯಲು ಯತ್ನಿಸಿದ ಆಲಿ. ಏಕೋ, ಏನೋ ಆ ದೀಪ ಬೆಳಗಿನಜಾವದವರೆವಿಗೂ ಆರಲಿಲ್ಲ.

ಅಂತೂ ಬೆಳಗಾಯಿತು. ಆಲಿಯ ಮಿತ್ರರು ಹೇಸರ ಕತ್ತೆಗಳೊಂದಿಗೆ ಬಂದರು.

ಅವರನ್ನು ಕಂಡು ಆಲಿ "ಹಸಿವು ದಹಿಸುತ್ತಿದೆ ; ಪಂದ್ಯ ಗೆದ್ದೆ. ನನಗೆ ಊಟವಿಡಿಸುವ ಏರ್ಪಾಡನ್ನು ಬೇಗಮಾಡಿ" ಎಂದ.

"ಆ ಕುದುರೆಯನ್ನು ಮೊದಲು ಅತ್ತ ಕಟ್ಟಿ ಹಾಕು. ಸರಿ, ನಾವು ಹೇಳಿದ ನಿಯಮಗಳೆಲ್ಲವನ್ನೂ ನೀನು ಪಾಲಿಸಿದ್ದರೆ ನಾವು ಸೋತಂತೆಯೇ ಸರಿ. ಹಾಗಲ್ಲದ ಪಕ್ಷಕ್ಕೆ ನೀನು ಪರಾಜಯ ಹೊಂದಿದಂತೆ" ಎಂದರು ಮಿತ್ರರು. "ಬೆಳಗಿನವರೆವಿಗೂ ಈ ಆಲದ ಮರದ ಕೆಳಗೆ ಕಳೆದೆನಲ್ಲಾ, ಮತ್ತೇನು ನಿಯಮವಿದೆ?" ಎಂದ ಆಲಿ ಬೆರಗಾಗಿ.

"ಯೋಚಿಸಿ ಹೇಳು. ಬೆಳಗಾಗುವವರೆವಿಗೂ ನೀನು ಗಾಢಾಂಧಕಾರದಲ್ಲಿ ಕಳೆದೆಯಾ?" ಎಂದರು ಮಿತ್ರರು.

"ನನ್ನ ಹತ್ತಿರ ಯಾವುದೇ ವಿಧವಾದ ದೀಪವಿಲ್ಲ, ಬೇಕಾದರೆ ನೀವೇ ನೋಡಿ" ಎಂದ ಆಲಿ ಅನುಮಾನದಿಂದ ಅವರಕಡೆ ನೋಡುತ್ತ.

"ನಿನ್ನಹತ್ತಿರವಿಲ್ಲದಿದ್ದರೇನು? ನಿನ್ನೆ ರಾತ್ರಿ ನಮ್ಮ ಗ್ರಾಮದ ಒಂದಾನೊಂದು ಮಹಡಿಯ

ಆಗಲೇ ಕತ್ತಲಾವರಿಸಿತ್ತು. ಕ್ರಮೇಣ ಎಲ್ಲ ಮನೆಗಳಲ್ಲೂ ದೀಪಗಳು ಬೆಳಗಿದುವು. ಸ್ವಲ್ಪ ಹೊತ್ತಿಗೆಲ್ಲಾ ಚಳಿ ಪ್ರಾರಂಭವಾಯಿತು. ಕ್ರಮೇಣ ಮಂಜು ಸಹ ಬೀಳಲಾರಂಭಿಸಿತು. ಆಲಿಗೆ ಚಳಿ ಮತ್ತು ಹಸಿವಿನ ಬಾಧೆ ಮೊದಲಾಯಿತು.

"ಈ ಬಾಧೆಯನ್ನು ಹೋಲಿಸಿದರೆ ದೆವ್ವಗಳಿಂದ ಆಗುವ ತೊಂದರೆ ಒಂದು ಲೆಕ್ಕವೇ? ಬೆಳಗ್ಗೆ ಪಂದ್ಯ ಗೆದ್ದಕೂಡಲೇ ಮೂವರು ಉಣ್ಣುವಷ್ಟು ಊಟಮಾಡಿಬಿಡುತ್ತೇನೆ" ಎಂದು ಮನಸ್ಸಿನಲ್ಲೇ ಅಂದುಕೊಂಡ ಆಲಿ.

ರಾತ್ರಿಯಾದಂತೆ ಗ್ರಾಮದಲ್ಲಿದ್ದ ದೀಪಗಳೆಲ್ಲಾ ಆರಿಹೋದವು. ಆದರೆ ಒಂದು ಮಹಡಿ ಮನೆಯ ಕೋಣೆಯಲ್ಲಿ ಮಾತ್ರ ದೀಪ



ಮನೆಯ ಕೋಣೆಯಲ್ಲಿ ದೀಪ ಬೆಳಗಾಗುವ ವರೆವಿಗೂ ಉರಿಯುತ್ತಿತ್ತೆಂದು ನಮಗೆ ತಿಳಿದು ಬಂದಿದೆ. ಅದರ ಬೆಳಕು ನಿನಗೆ ಕಾಣಿಸ ಲಿಲ್ಲವೆ?" ಎಂದು ಕೇಳಿದರು. "ಆ ಮಾತು ನಿಜ" ಎಂದ ಆಲಿ. "ಹಾಗದರೆ ನೀನು ಸೋತುಹೋದೆ. ನೀನೇ ನಮಗೆ ಭೋಜನ ಕೂಟವೇರ್ಪಡಿಸಬೇಕು" ಎಂದರು.

"ಎಲ್ಲೋ ಒಂದು ಮೈಲು ದೂರದಲ್ಲಿ ಯಾರೋ ಒಂದು ಕಾಂಡೀಲು ಉರಿಸಿದರೆ ಅದರ ಬೆಳಕು ನನಗೆ ಸಹಾಯವಾದೀತೆಂದು ನಿಮ್ಮ ಅಬಿಪ್ರಾಯವೋ ಹೇಗೆ?" ಎಂದ ಆಲಿ ನಿರ್ಘಾಂತನಾಗಿ.

"ಒಂದು ಮೈಲೋ, ಎರಡು ಮೈಲೋ ಬೆಳಗಿನ ಜಾವದವರೆವಿಗೂ ಆ ಬೆಳಕು ನಿನಗೆ ಕಾಣಬರುತ್ತಿರಲು ನೀನು ಗಾಢಾಂಧ ಕಾರದಲ್ಲಿ ಕಳೆದೆ ಎಂದು ಹೇಗೆ ಹೇಳು ವುದು?" ಇದು ಮಿತ್ರರ ಸವಾಲು.

ತನ್ನನ್ನು ಮೋಸಗೊಳಿಸಲು ಅವರೇ ಬೆಳ ಗಿನ ಜಾವದವರೆವಿಗೂ ಕಂಡೀಲನ್ನು ಹಚ್ಚಿ, ತನಗೆ ಕಾಣುವಂತೆ ಇಟ್ಟಿದ್ದರೆಂದು ಆಲಿ ಆಗ ತಿಳಿದುಕೊಂಡ.

"ನಾನು ಸ್ಪರ್ಧೆಯಲ್ಲಿ ಸೋತೆನೆಂದು ಹೇಳಿದಿರಿ, ಸರಿ, ಊಟದ ಸಮಯಕ್ಕೆ ನೀ ವಿಬ್ಬರೂ ನಮ್ಮ ಮನೆಗೆ ಬನ್ನಿ. ನಿಮಗೆ ಭರ್ಜರಿ ಊಟ ಹಾಕುತ್ತೇನೆ" ಎಂದು ಹೇಳಿ ಆಲಿ ತನ್ನ ಮನೆಯಕಡೆ ಹೊರಟುಹೋದ. ಅಮಾಯಕನಾದ ಆಲಿಯನ್ನು ಮೋಸ ಮಾಡಿ, ಒಂದು ಔತಣವನ್ನು ಗಿಟ್ಟಿಸಿದೆವೆಂದು ಆನಂದಗೊಂಡು ಆ ಮಿತ್ರರಿಬ್ಬರೂ ಊಟದ ಹೊತ್ತಿಗೆ ಸರಿಯಾಗಿ ಆಲಿಯ ಮನೆಗೆ ಹೋದರು. ಆಲಿ ಅವರಿಗೆ ಮರ್ಯಾದೆಯಿಂದ ಸ್ವಾಗತ ಬಯಸಿ, ಸುಖಾಸನಗಳಲ್ಲಿ ಕೂರಿಸಿ, ಆ ಮಾತು, ಈ ಮಾತು ಮಾತನಾಡಲು ಪ್ರಾರಂಭಿಸಿದ.

ಸಂಭಾಷಣೆ ಬಹಳ ಹೊತ್ತು ನಡೆದ ತರು ವಾಯ ಅತಿಥಿಗಳು "ಇನ್ನೂ ಅಡಿಗೆಯಾಗಿಲ್ಲ ವೇನು?" ಎಂದು ಕೇಳಿದರು. ಆಲಿ ಲಗು ಬಗನೆ ಒಳಗೆ ಹೋಗಿ ಬಂದು "ಇನ್ನೂ ಆಗಿಲ್ಲ" ಎಂದ. ಮತ್ತೆ ಸ್ವಲ್ಪ ಹೊತ್ತು ಹರಟೆ ಕೊಚ್ಚುತ್ತಿದ್ದರು. ಮತ್ತೊಮ್ಮೆ ಆಲಿ ಎದ್ದು ಹೋಗಿ ಬಂದು "ಆಗುತ್ತಾ ಇದೆ" ಎಂದ.

ಸೂರ್ಯನು ನೆತ್ತಿಯ ಮೇಲೇರಿದ. ಆತಿಥ್ಯಕ್ಕೆ ಬಂದ ಆಲಿಯ ಗೆಳೆಯರಿಗೆ ಹಸಿವಿನ ಬಾಧೆ ಹೆಚ್ಚಾಗುತಿತ್ತು. ಇಷ್ಟರಲ್ಲಿ ಆಲಿ ಐದಾರುಸಾರಿ ಅಡಿಗೆಮನೆಯೊಳಕ್ಕೆ ಹೋಗಿ ಬಂದು "ಇನ್ನೇನು ಆಯಿತು" ಎಂದನೇ ಹೊರತು, ಅಡಿಗೆ ಎಷ್ಟು ಪೂರೈಸಿತು ಎಂಬುದನ್ನು ಮಾತ್ರ ಹೇಳಲಿಲ್ಲ. ಕೊನೆಗೆ ಆಲಿಯ ಮಿತ್ರರಲ್ಲಿ ಒಬ್ಬನು "ಆಲಸ್ಯವಾಗಿದ್ದೇನೋ ಆಯಿತು; ಭರ್ಜರಿ ಅಡಿಗೆಯಾದರೂ ಮಾಡಿಸುತ್ತಿರುವೆತಾನೇ?" ಎಂದ.

ಆಲಿ ತಾನು ಮಾಡಿಸುತ್ತಿದ್ದ ಮಾಂಸ ಮತ್ತು ಇತರ ಪದಾರ್ಥಗಳ ಪಟ್ಟಿ ಹೇಳಿದ. ಅತಿಥಿಗಳು ಸಂತೃಪ್ತರಾಗಿ ಯಥಾಪ್ರಕಾರ ಮಾತಿಗಿಳಿದರು. ಸಾಯಂಕಾಲವಾಯಿತು. ಆಲಿ ಮತ್ತೆ ಒಳಕ್ಕೆ ಹೋಗಿ ಬಂದು "ಆಗಿಯೇ ಹೋಯಿತು" ಎಂದ.

ಆಲಿಯ ಗೆಳೆಯರಿಗೆ ಇನ್ನು ತಡೆಯಲಾಗಲಿಲ್ಲ. "ಎಲ್ಲಿ, ನೀನು ತಯಾರಿಸುತ್ತಿರುವ ಅಡಿಗೆಯನ್ನು ಒಂದುಸಾರಿ ನೋಡೋಣ." ಎಂದು ಎದ್ದರು. ಆಲಿ ಒಳಗೆ ಕರೆದುಕೊಂಡು ಹೋದ. ಒಲೆಯ ಮೇಲೆ ದೊಡ್ಡ ಪಾತ್ರೆಯಲ್ಲಿ ಆಲಿ ಹೇಳಿದ ಮಾಂಸ ಮತ್ತು ಪದಾರ್ಥಗಳಿದ್ದುವು. ಬಾಂಡ್ಲಿಯ ಕೆಳಗೆ ಸೌದೆ ಯಿರಲಿಲ್ಲ; ಬೆಂಕಿಯೂ ಇರಲಿಲ್ಲ. ಕೇವಲ ಒಂದೇ ಒಂದು ಕಂಡೀಲು ಉರಿಯುತ್ತಿದೆ!

"ಅರೆ ಇಷ್ಟು ಹೊತ್ತು ನಮಗೆ ಆಗಬೇಕಾದ ಅಡಿಗೆ ಈ ಕಂದೀಲಿನಿಂದ ತಯಾರು ಮಾಡಿಸುತ್ತಿರುವೆಯಾ? ಎಲ್ಲಾ ಮೋಸ," ಎಂದು ಆ ಮಿತ್ರರಿಬ್ಬರೂ ಕೂಗಾಡಿದರು.

"ಗೆಳಯರೇ, ನಿಮ್ಮ ಮಾತು ಕೇಳಿ ನನಗೆ ಅಚ್ಚರಿಯಾಗುತ್ತಿದೆ. ಒಂದು ಮೈಲು ದೂರದಿಂದ ಗಾಢಾಂಧಕಾರವನ್ನು ತೊಲಗಿಸುವ ಶಕ್ತಿಯುಳ್ಳ ಕಂಡೀಲಿನ ಸಹಾಯದಿಂದ ಇಬ್ಬರು ಮನುಷ್ಯರಿಗೆ ಸರಿಹೋಗುವ ಅಡಿಗೆ ಮಾಡಲು ಅಸಾಧ್ಯವೇ? ನನ್ನ ಊಟವೇನೋ ಆಗಲೇ ಆಯಿತು. ಅವಸರ ಪಡದೆ ಸ್ವಲ್ಪ ಹೊತ್ತಿದ್ದರೆ ನೀವೂ ಮೃಷ್ಟಾನ್ನ ಭೋಜನ ಮಾಡಬಹುದು" ಎಂದ ಆಲಿ.

ಆಲಿಯ ಮಿತ್ರರು ಈ ಮಾತುಗಳನ್ನು ಕೇಳಿ ನಾಚಿ, ಬಂದದಾರಿ ಹಿಡಿದರು.






# 7

[ಅಗ್ನಿಪರ್ವತದ ಉರಿಯಿಂದ ದೂರತಪ್ಪಿಸಿಕೊಂಡು ಓಡಿಹೋಗುತ್ತಿದ್ದ ಸಮರಸೇನನೂ ಸೈನಿಕರೂ ತಲೆಕೆಳಕಾಗಿ ಮರದಲ್ಲಿ ನೇತಾಡುವ ಮನುಷ್ಯನನ್ನು ಕಂಡರಲ್ಲವೆ? ಅನಂತರ ಹೆಜ್ಜೆಯ ಗುರುತುಗಳನ್ನು ಅನುಸರಿಸಿ ಹೋಗುವವರಿಗೆ ಆನೆಗಳ ಮಂದೆ ಇದಿರಾಯಿತು. ಅವರು ಮರವೇರಿದರು. ಮತ್ತೆ ನೋಡಿದರೆ ಆನೆಗಳಿಂದ ಹೆಜ್ಜೆಯ ಗುರುತುಗಳು ಮಾಯವಾಗಿದ್ದುವು. ತರುವಾಯ—]

ಸಮರಸೇನನೂ, ಸೈನಿಕರೂ ದಿಗ್ಮೂಢರಾಗಿ ಮರದ ಕೆಳಗೆ ನಿಂತುಬಿಟ್ಟರು. ಆನೆಗಳ ಕಾಲಿನ ತುಳಿತದಿಂದ ನಲುಗಿಹೋದ ರೆಂಬೆಗಳು ಸುತ್ತಲೂ ಚಲ್ಲಾಪಿಲ್ಲಿಯಾಗಿ ಬಿದ್ದಿವೆ. ಅಗ್ನಿಪರ್ವತ ನಿಃಶಬ್ದವಾಗಿದೆ. ಆದರೆ ದೂರದಲ್ಲಿ ಅಲ್ಲಲ್ಲಿ ಮರಗಳು ಸುಡುತ್ತಿರುವುದು ಬೆಂಕಿಯ ಜ್ವಾಲೆಗಳು ಸೂಚಿಸುತ್ತಿವೆ.

ಎಲ್ಲರೂ ನಿರುತ್ಸಾಹವನ್ನು ಹೊಂದಿದರು. ತಮ್ಮ ಹಡಗುಗಳನ್ನು ನಿಲ್ಲಿಸಿರುವ ಪೂರ್ವ ತೀರವನ್ನು ಸೇರುವ ಆಶೆ ಮಣ್ಣುಗೂಡಿತು. ಮಾಂತ್ರಿಕರ ಪೀಡೆ ಕಳೆದು ಹೋಯಿತೆಂದುಕೊಳ್ಳಲು ಯಾವ ಸೂಚನೆಯೂ ಇಲ್ಲ. ಒಂದು ಕಡೆ ಕ್ರೂರ ಮೃಗಗಳ ಕಾಟ, ಮತ್ತೊಂದು ಕಡೆಯಲ್ಲಿ ಜ್ವಾಲಾಮುಖಿಯ ಜಂಜಾಲು, ದಾಟಲಸಾಧ್ಯವಾದ ನದಿ, ಓ, ಎಲ್ಲಾ ಎಡರು ತೊಡರುಗಳೇ! ಈ ದ್ವೀಪದ ಯಾವುದೋ ಒಂದು ಕಡೆ ವಾಸಿಸುತ್ತಿರುವ ಮಾನವರ ಸಮೀಪಕ್ಕೆ ಹೋಗೋಣವೆಂದರೆ ಆ ಪ್ರಯತ್ನವೂ ವಿಫಲವಾಯಿತು.

ಸೈನಿಕರೆಲ್ಲರೂ ತಮ್ಮ ನಾಯಕನ ಕಡೆಯೇ ನೋಡ ತೊಡಗಿದರು. ಇಂತಹ ಏನೂ ತೋರದ ಪರಿಸ್ಥಿತಿಯಲ್ಲಿ ಅವರೆಲ್ಲರನ್ನೂ



ಆಶ್ಚರ್ಯಗೊಳಿಸುವಂತಹ ಆರ್ತನಾದ ವೊಂದು ಕೇಳಿಸಿತು. ಆ ಕಂಠಧ್ವನಿ ಏಕಾಕ್ಷಿಯದಲ್ಲ; ಚತುರ್ನೇತ್ರನದೂ ಅಲ್ಲ. ಒಬ್ಬ ಮಾನವನು ಮಾಡುತ್ತಿರುವ ಚೀತ್ಕಾರ.

ಸಮರಸೇನನು ಕೂಡಲೇ ಒರೆಯಿಂದ ಕತ್ತಿ ತೆಗೆದು "ಬನ್ನಿ ಬೇಗ ಬನ್ನಿರಯ್ಯಾ" ಎಂದು, ಆರ್ತನಾದ ಕೇಳಿಬಂದ ಕಡೆಗೆ ಓಡಲು ಪ್ರಾರಂಭಿಸಿದನು. ಸೈನಿಕರೂ ಸಹ ತಮ್ಮ ಖಡ್ಗಗಳನ್ನು ಸಿದ್ಧಪಡಿಸಿಕೊಂಡು ನಾಯಕನನ್ನು ಹಿಂಬಾಲಿಸಿದರು. ಹಾಗೆ ಮುಂದೆ ಹೋದಂತೆ ಆ ಮಾನವ ಕಂಠಧ್ವನಿ ಅವರಿಗೆ ಮತ್ತಷ್ಟು ಸ್ಪಷ್ಟವಾಗಿ, ಕೇಳಿಸುತಿತ್ತು.

ಕೊಂಚಹೊತ್ತಿಗೆಲ್ಲಾ ಅವರೆಲ್ಲರೂ ಒಂದು ಕಡೆ ಸೇರಿದರು. ಅಲ್ಲಿ ಕಂಡುಬಂದ ಭೀಕರ



ದೃಶ್ಯ ಅವರನ್ನು ಭಯಕಂಪಿತರನ್ನಾಗಿ ಮಾಡಿತು. ಆದರೆ ಮರುಕ್ಷಣವೇ ಯಾವುದೋ ಒಂದು ದೂರದ ಆಶೆ ಅವರಿಗೆ ಉತ್ಸಾಹವನ್ನುಂಟುಮಾಡಿತು. ಆ ಮಾಯಾದ್ವೀಪದಲ್ಲಿ ನೊತ್ತಮೊದಲನೇ ಸಾರಿ ಅವರು ಪ್ರಾಣದೊಂದಿಗಿರುವ ಮಾನವನನ್ನು ನೋಡುತ್ತಿದ್ದಾರೆ! ಆದರೆ ಆ ವ್ಯಕ್ತಿ ಪ್ರಮಾದಕರವಾದ ಆಪತ್ತಿನಲ್ಲಿ ಸಿಲುಕಿಕೊಂಡಿದ್ದಾನೆ.

ಪಾಪ, ಯಾರೋ ಅವನ ಕೈಗಳನ್ನು ಜೋಡಿಸಿ, ಮರಕ್ಕೆ ಕಟ್ಟಿಹಾಕಿದ್ದಾರೆ. ಅಂತಹ ನಿಸ್ಸಹಾಯಕ ಸ್ಥಿತಿಯಲ್ಲಿರುವ ಆತನನ್ನು ಭಕ್ಷಿಸಲು ಐದಾರು ತೋಳಗಳು ಅಲ್ಲಿಗೆ ಬಂದಿವೆ. ಅದೇಸಮಯಕ್ಕೆ ಕ್ಷುದ್ಬಾಧೆಯಿಂದ ಅಲೆದಾಡುತ್ತಿದ್ದ ಒಂದು ಭಯಂಕರವಾದ ಹುಲಿಯೂ ಆ ಸ್ಥಳಕ್ಕೆ ಬಂದಿತು. ಆ ದುರದೃಷ್ಟನ ಮಾಂಸಕ್ಕಾಗಿ ತೋಳಗಳೂ, ಮತ್ತು ಹುಲಿಯೂ ಭೀಕರ ಕಾಳಗಮಾಡುತ್ತಿವೆ. ಭಯದಿಂದ ತತ್ತರಗೊಂಡು ಆ ಮನುಷ್ಯ ಚೀರಾಡುತ್ತಿದ್ದಾನೆ.

ಸಮರಸೇನನು ಕ್ಷಣಮಾತ್ರದಲ್ಲಿ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡನು. ಹುಲಿಯ ಪಂಜದ ಏಟಿಗೆ ಒಂದೊಂದೇ ತೋಳ ಅರಚುತ್ತಾ ಕೆಳಗೆ ಬೀಳುತ್ತಿದೆ. ಆ ರೀತಿ ಅವುಗಳನ್ನು ಕೊಂದಬಳಿಕ ಸಾವಕಾಶವಾಗಿ ಮಾನವನ ಮಾಂಸವನ್ನು ಭಕ್ಷಿಸಬಹುದೆಂದು ಹುಲಿ ಹೋರಾಟ ಸಾಗಿಸುತಿತ್ತು. ತಡಮಾಡಿದರೆ ಪ್ರಮಾದವೆಂದು ಅರಿತು ಸಮರಸೇನನು



ಗುರಿಯಿಟ್ಟು ಹುಲಿಗೆ ಹೊಡೆದನು. ಆ ಪೆಟ್ಟಿಗೆ ತಾಳಲಾರದೆ ಹುಲಿ ಬೊಬ್ಬಿಡುತ್ತಾ ಕೆಳಗೆ ಬಿದ್ದು ಸತ್ತುಹೋಯಿತು.

ಕೂಡಲೇ ಸೈನಿಕರು ಮುಂದಕ್ಕೆ ನುಗ್ಗಿದರು. ಹಸಿದಿದ್ದ ತೋಳಗಳು ಅರಚುತ್ತಾ ಅವರಮೇಲೆ ಹಾರಿದವು. ಸೈನಿಕರು ಬೆದರದೆ ತಮ್ಮ ಕೈಯಲ್ಲಿದ್ದ ಖಡ್ಗಗಳಿಂದ ಅವುಗಳನ್ನು ತುಂಡು ತುಂಡು ಮಾಡಿ ಚೆಲ್ಲಿದರು. ಅಷ್ಟರಲ್ಲಿ ಸಮರಸೇನನೂ ಅಲ್ಲಿಗೆ ಬಂದು ಆ ವ್ಯಕ್ತಿಯ ಕಟ್ಟುಗಳನ್ನು ಬಿಚ್ಚಿದನು.

"ನನ್ನನ್ನು ಪ್ರಾಣಾಪಾಯ ಸ್ಥಿತಿಯಿಂದ ಕಾಪಾಡಿದ ನೀವು ನಿಜವಾಗಿಯೂ ಮಹಾನುಭಾವರು. ನಿಮ್ಮ ಸಹಾಯವನ್ನು ನನ್ನ ಪ್ರಾಣವಿರುವವರೆವಿಗೂ ಮರೆಯಲಾರೆ" ಎಂದು ಆತ ತನ್ನ ಕೃತಜ್ಞತೆಯನ್ನು ಸೂಚಿಸುತ್ತ ಕೈಮುಗಿದ.

ಆ ಮನುಷ್ಯನ ರೂಪರೇಖೆಗಳನ್ನೂ, ಮಾತಿನ ಧೋರಣೆಯನ್ನೂ ಕಂಡು ಸಮರಸೇನನಿಗೆ ಆಶ್ಚರ್ಯವಾಯಿತು. ಆತನು ಆ ಮಾಯಾದ್ವೀಪದ ನಿವಾಸಿಯಲ್ಲವೆಂದು ಖಚಿತವಾಯಿತು. ಆತನು ಕುಂಡಲಿನೀ ದ್ವೀಪದ ನಿವಾಸಿಯಿರಲೂಬಹುದೆಂಬ ಅನುಮಾನವುಂಟಾಯಿತು ಸಮರಸೇನನಿಗೆ.

"ನೀನು ಯಾವದೇಶಸ್ಥನು?"

"ನಾನು...ನಾನು ಕುಂಡಲಿನಿ ದ್ವೀಪವಾಸಿ...ಆ ದೇಶದ ಸೇನಾನಾಯಕರಾದ ಸಮರಸೇನರಲ್ಲವೇ ತಾವು?" ಎಂದು ಆ






ಹೊಸ ವ್ಯಕ್ತಿ ಆಶ್ಚರ್ಯಚಕಿತನಾಗಿ ಕೇಳಿದ. ಸಮರಸೇನನಿಗೂ, ಆತನ ಸೈನಿಕರಿಗೂ ಈ ಪ್ರಶ್ನೆ ತುಂಬಾ ಅಚ್ಚರಿಯನ್ನುಂಟು ಮಾಡಿತು. ಈ ಹೊಸಬನು ತಮ್ಮೊಂದಿಗೆ ಹಡಗಿನಲ್ಲಿ ಬಂದವನಲ್ಲವೆಂದು ಅವರೆಲ್ಲರಿಗೂ ತಿಳಿದಿದೆ. ಹಾಗಾದರೆ ಈತನು ಯಾವಾಗ ಇಲ್ಲಿಗೆ ಬಂದ? ಈ ಕಷ್ಟದಲ್ಲಿ ಹೇಗೆ ಸಿಲುಕಿಕೊಂಡ? ಎಂದು ಯೋಚನೆ ಗೊಳಗಾದರು.

ಆ ಹೊಸ ಸೈನಿಕನು ಇವರ ಮನೋಭಾವವನ್ನು ಸೂಕ್ಷ್ಮವಾಗಿ ಗ್ರಹಿಸಿ ಇಂತೆಂದನು:

"ಅಂದು ನೀವು ಹಡಗಿನಲ್ಲಿ ಪ್ರಯಾಣ ಹೊರಟಾಗ ಧೂಮಕೇತು ಕಾಣಿಸಿತಷ್ಟೇ. ಆದರೂ ನೀವು ಆಸ್ಥಾನ ಜೋತಿಷ್ಕನ ಸಲಹೆ



ಯನ್ನು ಲೆಕ್ಕಿಸದೆ ಪ್ರಯಾಣ ಬೆಳೆಸಿದಿರಿ. ಆ ತರುವಾಯ ತುಸ ಹೊತ್ತಿಗೆಲ್ಲಾ ಭಾರಿಬಿರುಗಾಳಿ ಪ್ರಾರಂಭವಾಗಿ, ಸಮುದ್ರವೇ ಅಲ್ಲಕಲ್ಲೋಲ ವಾಯಿತು. ಚಿತ್ರಸೇನ ಮಹಾರಾಜರು ತುಂಬಾ ಕಳವಳಗೊಂಡರು. ದಿನಂ ಪ್ರತಿ ನಿಮ್ಮ ಕ್ಷೇಮಕ್ಕಾಗಿ ಕುಂಡಲಿನೀ ದೇವಿಗೆ ಪೂಜೆಗಳನ್ನು ಮಾಡಿಸಿದರು.

ಆದರೆ ಚಂಡಮಾರುತ ಸುಮಾರು ಏಳು ದಿನಗಳವರೆವಿಗೂ ಅತಿ ಭಯಂಕರವಾಗಿ ಬೀಸಿತು. ನೀವು ಏನಾದಿರೋ ಎಂದು ಮಹಾರಾಜರೂ, ಪ್ರಜೆಗಳೂ ದಿಗಿಲುಗೊಂಡರು. ಪ್ರತಿದಿನ ಸಾವಿರಾರು ಪ್ರಜೆಗಳು ರಾಜಭವನಕ್ಕೆ ಬಂದು ಹಡಗಿನಲ್ಲಿ ಪ್ರಯಾಣ ಬೆಳೆಸಿದ ತಮ್ಮ ತಮ್ಮ ಬಂಧುಮಿತ್ರರ ಕ್ಷೇಮಸಮಾಚಾರವನ್ನು ಕೇಳುತ್ತಿದ್ದರು. ಕೊನೆಗೆ ಚಿತ್ರಸೇನ ಮಹಾರಾಜರು ಆಸ್ಥಾನ ದೈವಜ್ಞನಿಂದ ಅಂಜನಹಾಕಿಸಿ ನೀವಿರುವ ಸ್ಥಳ ಮತ್ತು ಸ್ಥಿತಿಯನ್ನು ಅರಿತುಕೊಳ್ಳಲು ನಿಶ್ಚಯಿಸಿದರು. ಒಂದು ಶುಭಮುಹೂರ್ತದಲ್ಲಿ ಅಂಜನ ಹಾಕಿಸಿ ನೋಡಿದರು. ಹಡಗುಗಳು ಮುಳುಗಿ ಹೋಗಲು ಉಳಿದ ಕೆಲವಾರು ಸೈನಿಕರೊಂದಿಗೆ ನೀವು ಒಂದಾನೊಂದು ದ್ವೀಪವನ್ನು ಸೇರಿಕೊಂಡಂತೆ ತಿಳಿಯಬಂತು.

ಚಿತ್ರಸೇನ ಮಹಾರಾಜರು ಮಂತ್ರಿ ಸಾಮಂತರೊಂದಿಗೆ ಸಮಾಲೋಚನೆ ಮಾಡಿದರು. ಆ ಕೆಲವು ಸೈನಿಕರೊಂದಿಗೆ ನೀವು ಯಾವುದೋ ನೂತನದ್ವೀಪವನ್ನು ಸೇರಿರುವು

 



ದರಿಂದ ಕಷ್ಟ ಕೋಟಲೆಗಳಿಗೆ ಒಳಗಾಗುವ ಅವಕಾಶವಿದೆ ಎಂದು ಅವರು ಊಹಿಸಿದರು. ಒಂದು ವಾರದನಂತರ ಮತ್ತೆ ಕೆಲವು ಜನ ಸೈನಿಕರನ್ನು ಜೊತೆಗೂಡಿಸಿ, ಕುಂಭಾಂಡನ ನಾಯಕತ್ವದಲ್ಲಿ ನಿಮ್ಮನ್ನು ಹುಡುಕಲು ಕಳುಹಿಸಿದರು..."

"ಯಾರು ಈ ಕುಂಭಾಂಡ? ಓಹೋ ತಿಳಿಯಿತು. ಕುಂಭಾಂಡ ಸಂಸ್ಥಾನಾಧಿಪತಿಯೇ?" ಎಂದು ವಿಸ್ಮಯ ಸೂಚಿಸಿದ ಸಮರಸೇನ.

"ಹೌದು, ಅವನಿಂದಲೇ ನಾನೀಗ ಈ ಪ್ರಾಣಾಪಾಯ ಸ್ಥಿತಿಯಲ್ಲಿ ಸಿಲುಕಿಕೊಂಡೆ" ಎಂದ ಸೈನಿಕನು ಹಲ್ಲು ಕಟಕಟ ಕಡಿಯುತ್ತ.

ಸಮರಸೇನನು ಆ ಮಾತು ಕೇಳಿ ವಿಸ್ಮಿತನಾದನು. ಸೈನಿಕರಿಗೆ ಇದೇನೂ ಅರ್ಥವಾದಂತೆ ತೋರಲಿಲ್ಲ. ಮತ್ತೆ ಆ ಹೊಸಬನು ತನ್ನ ಕಥೆಯನ್ನು ಮುಂದುವರಿಸಿದ:

"ನಾವು ಕೆಲವು ದಿನಗಳಿಗೆಲ್ಲಾ ಈ ದ್ವೀಪವನ್ನು ತಲುಪಿದೆವು. ದಕ್ಷಿಣ ದಿಕ್ಕಿನ ತೀರದಲ್ಲಿ ಹಡಗುಗಳನ್ನು ನಿಲ್ಲಿಸಿದೆವು. ಕುಂಭಾಂಡನು ನಮ್ಮೆಲ್ಲರನ್ನೂ ತೀರದ ಹತ್ತಿರವೇ ಇರುವಂತೆ ಹೇಳಿ ಇಬ್ಬರೇ ಇಬ್ಬರು ಸೈನಿಕರೊಂದಿಗೆ ಈ ದ್ವೀಪದೊಳಭಾಗವನ್ನು ಹೊಕ್ಕನು. ಆ ದಿನವೆಲ್ಲಾ ನಾವು ಆತನ ಬರವಿಗಾಗಿ ಕಾಲ ಕಳೆದೆವು. ಮಾರನೆಯ ದಿನ ಬೆಳಗ್ಗೆ ಕುಂಭಾಂಡನೊಬ್ಬನೇ ಹಿಂತಿರುಗಿ ಬಂದ. ಬಂದ ತಕ್ಷಣ ನಮ್ಮ ಹತ್ತಿರವಿದ್ದ ಬಿಲ್ಲು-ಬಾಣಗಳನ್ನೆಲ್ಲಾ



ತೆಗೆದುಕೊಂಡು, ಕಟ್ಟು ಕಟ್ಟಿಸಿ ಸಮುದ್ರದೊಳಕ್ಕೆ ಹಾಕಿಸಿಬಿಟ್ಟನು.

ಈ ಚೋದ್ಯ ನಮಗೇನೂ ಅರ್ಥವಾಗಲಿಲ್ಲ. ಆತನೊಂದಿಗೆ ಹೊರಟ ಇಬ್ಬರು ಸೈನಿಕರು ಏನಾದರೋ ನಮಗೆ ತಿಳಿಯದು. ನಾವು ಆತನನ್ನು ಕೇಳಲು, ಅವರನ್ನು ಕಾಡು ಜನರು ಕೊಂದುಬಿಟ್ಟರೆಂದು ಸಮಾಧಾನ ಹೇಳಿದ. ಬಿಲ್ಲುಬಾಣಗಳನ್ನು ಆ ರೀತಿ ಸಮುದ್ರದಲ್ಲಿ ಎಸೆಯಲು ಕಾರಣವೇನೆಂದು ಕೇಳಿದೆವು. ಅದಕ್ಕೆ ಕುಂಭಾಂಡನು ತಾನು ಸೈನ್ಯಾಧಿಕಾರಿ ಎಂತಲೂ, ತಾನೇನು ಮಾಡಿದರೂ ಯಾರೂ ಪ್ರಶ್ನೆ ಮಾಡಬೇಕಾದ ಅಗತ್ಯವಿಲ್ಲವೆಂತಲೂ ನಿರ್ದಾಕ್ಷಿಣ್ಯವಾಗಿ ನುಡಿದನು.

"ಹಾಗಾದರೆ ಕುಂಭಾಂಡನೂ ಸಹ ತನ್ನ





ಬಿಲ್ಲು ಬಾಣಗಳನ್ನು ಸಮುದ್ರದೊಳಕ್ಕೆ ಬಿಸಾಡಿದನೇನು?'' ಎಂದು ಸಮರಸೇನ ಕೇಳಿದ ಉತ್ಸುಕತೆಯಿಂದ.

"ಇರುವ ಗಮ್ಮತ್ತೆಲ್ಲಾ ಅಲ್ಲೇ! ಆತನು ತನ್ನ ಬಿಲ್ಲುಬಾಣಗಳನ್ನು ಮಾತ್ರ ಭದ್ರಪಡಿಸಿಕೊಂಡ. ನಾವು ಪ್ರಶ್ನೆಮಾಡಲು, ಆ ರೀತಿ ಪ್ರಶ್ನಿಸುವುದು ತನ್ನ ನಾಯಕತ್ವವನ್ನು ಧಿಕ್ಕರಿಸಿದಂತಾಗುವುದೆಂದು ದಭಾಯಿಸಿಬಿಟ್ಟ. ಆ ತರುವಾಯ ಸ್ವಲ್ಪ ಹೊತ್ತಿಗೆಲ್ಲಾ ಗಂಡುಗೊಡಲಿ, ಈಟಿಗಳನ್ನು ತೆಗೆದುಕೊಂಡು ಕೆಲವು ಕಾಡುಜನರು ಕರ್ಕಶವಾಗಿ ಕೂಗುತ್ತಾ ನಮ್ಮಬಳಿಗೆ ಬಂದರು. ನಾವು ಕೈಗೆ ಸಿಕ್ಕಿದ ಕಲ್ಲುಗಳನ್ನೂ, ರೆಂಬೆಗಳನ್ನೂ ತೆಗೆದುಕೊಂಡು ಆತ್ಮರಕ್ಷಣೆ ಮಾಡಿಕೊಳ್ಳಲು ಪ್ರಯತ್ನಿಸಿದೆವು.

ಆದರೆ ಕುಂಭಾಂಡನು ಆ ಕಾಡುಜನರಿಗೆ ಶರಣಾಗತರಾಗುವಂತೆ ನಮಗೆ ಆಜ್ಞಾಪಿಸಿದನು. ನಮ್ಮಲ್ಲಿ ಅಷ್ಟು ಹೊತ್ತಿಗಾಗಲೇ ಅನೇಕ ಸೈನಿಕರು ಆ ಕಾಡು ಜನರ ಈಟಿಗೆ ಬಲಿಯಾಗಿಬಿಟ್ಟಿದ್ದರು. ಉಳಿದವರು ಇನ್ನೇನೂ ಮಾಡಲಾರದೆ ಅವರಿಗೆ ಶರಣಾಗತರಾದೆವು.''

"ಹೋರಾಟ ನಡೆಯುತ್ತಿದ್ದಾಗ ನಿಮಗೆ ಸಹಾಯಮಾಡಲು ಕುಂಭಾಂಡನು ಬರಲಿಲ್ಲವೇ?'' ಎಂದು ಕೇಳಿದ, ಸಮರಸೇನ.

"ಹಾಗೇನೂ ನಡೆಯಲಿಲ್ಲ. ನಾವು ಶರಣಾಗತರಾದ ಕೂಡಲೇ ಆ ಕಾಡುಜನರು ನಮ್ಮ ಕೈಕಾಲುಗಳನ್ನು ಕಟ್ಟಿಹಾಕಿದರು. ಕುಂಭಾಂಡನನ್ನು ಒಂದು ಪಲ್ಲಕಿಯಲ್ಲಿ ಕೂರಿಸಿ, ಕೆಲವು ಕಾಡುಜನರು ಭುಜದ ಮೇಲೇರಿಸಿಕೊಂಡು ಹಾಡುತ್ತಾ ಅವರ ಹಳ್ಳಿಗೆ ತೆಗೆದುಕೊಂಡು ಹೋದರು.

ನಾವು ಆ ಕಾಡುಜನರ ಬಂದಿಗಳಾಗಿರಬೇಕಾಯಿತು. ಅಂದಿನಿಂದ ಆ ವಿದ್ರೋಹಿ ಕುಂಭಾಂಡನು ಅವರ ರಾಜನಾಗಿ ವ್ಯವಹರಿಸುತ್ತಿದ್ದಾನೆ. ಆ ಕಾಡುಜನರಿಗೆ ಅವನು ಏನು ಹೇಳಿದರೆ ಅದೇ ವೇದವಾಕ್ಯ. ಈ ಕುಂಭಾಂಡನು ಅವರಮೇಲೆ ಇಷ್ಟು ಅಧಿಕಾರ ಚಲಾಯಿಸುವ ಹಕ್ಕನ್ನು ಅದು ಹೇಗೆ ಪಡೆದನೋ ನಮಗೆ ಆಗ ತಿಳಿಯಲಿಲ್ಲ."

"ಆದರೆ ಎರಡು ಮೂರು ದಿನಗಳಿಗೆಲ್ಲಾ ನಮ್ಮ ಸಂದೇಹ ನಿವಾರಣೆ ಆಯಿತು. ಆ



ಕಾಡುಜನ ಬಿಲ್ಲುಬಾಣಗಳನ್ನು ಕಂಡರಿಯರು. ಮನುಷ್ಯ ಕದಲದೆ ಒಂದು ಸ್ಥಳದಲ್ಲಿ ನಿಂತು ಎಲ್ಲಿಯೋ ಇರುವ ಪಕ್ಷಿಯನ್ನಾಗಲೀ, ಜಂತು ವನ್ನಾಗಲೀ ಬಾಣದಿಂದ ಕೊಲ್ಲುವುದು ಅವ ರಿಗೆ ಸೋಜಿಗವಾಗಿ ಕಾಣಿಸಿತು. ಈ ಮಹಿಮೆ ತನಗೊಬ್ಬನಿಗೇ ಇರುವುದೆಂದು ಹೇಳಿಕೊಂಡು, ಅವರಮೇಲೆ ಅಧಿಕಾರ ಪಡೆ ಯುವಸಲುವಾಗಿ, ಕುಂಭಾಂಡನು ನಮ್ಮ ಬಿಲ್ಲುಬಾಣಗಳನ್ನು ಗಂಟುಕಟ್ಟಿಸಿ ಸಮುದ್ರ ದಲ್ಲಿ ಹಾಕಿಸಿದ.

"ಈ ರಹಸ್ಯವು ಆಗಲೇ ನಮಗೆ ತಿಳಿಯ ಲಿಲ್ಲ. ಒಂದುದಿನ ಆಡವಿಪ್ರಾಂತವೆಲ್ಲಾ ತಮಟೆನಗಾರಿಗಳ ಶಬ್ದದಿಂದ ಮೊಳಗು ತ್ತಿದ್ದವು. ನೂರಾರು ಕಾಡುಜನರು ನಾವಿದ್ದ ಹಳ್ಳಿಗೆ ಬಂದರು. ಅವರೆಲ್ಲರ ಮುಂದೆ ಆ ದುರುಳ ಕುಂಭಾಂಡಕನು ತನ್ನ ಮಹಿಮೆ ಯನ್ನು ಪ್ರದರ್ಶಿಸಿದನು!

ಎಲ್ಲೋ ಆಕಾಶದಲ್ಲಿ ಹಾರುವ ಒಂದು ಗರುಡಪಕ್ಷಿಯನ್ನು ಬಾಣಬಿಟ್ಟು, ಕೆಳಗೆ ಉರು ಳಿಸಿದ. ದೂರದಲ್ಲಿ ಓಡುತ್ತಿದ್ದ ಒಂದು ಹುಲ್ಲೆ ಯನ್ನು ಅಂಬಿನಿಂದ ಕೊಂದುಹಾಕಿದ. ಇದನ್ನು ನೋಡಿ ಬಿಲ್ಲು ಬಾಣಗಳೆಂದರೇನೋ ತಿಳಿಯದ ಆ ಅನಾಗರೀಕರು ಕುಂಭಾಂಡ ನಸುತ್ತಲೂ ನೆರೆದು ಸಂತೋಷದಿಂದ ನರ್ತನ ಮಾಡಿದರು. ಅವರ ಸಹಾಯದಿಂದ ಈ ದ್ವೀಪದ ರಾಜನಾಗಬೇಕೆಂದು ಕುಂಭಾಂಡನ ಹವಣಿಕೆ."

"ಕಾಡುಜಂತುಗಳು, ಅಗ್ನಿಪರ್ವತಗಳು, ಒಬ್ಬಿಬ್ಬರು ಮಾಂತ್ರಿಕರ ಹೊರತು ಏನಿದೆ ಈ ದ್ವೀಪದಲ್ಲಿ" ಎಂದ ಸಮರಸೇನ.

"ಏನು, ಮಾಂತ್ರಿಕರೇ?" ಎಂದು ಭಯ ಕಂಪಿತನಾಗಿ ಪ್ರಶ್ನಿಸಿದ ಆ ಸೈನಿಕ. "ಅವರ ವಿಷಯವನ್ನೂ ಕೇಳಿದ್ದೇವೆ....ನಮ್ಮನ್ನು..."

ಅಷ್ಟರಲ್ಲಿ "ಕೇಳುವುದು ಮಾತ್ರವಲ್ಲ, ನೋಡಲೂಬಹುದು ಬೇಕಾದರೆ" ಎಂಬ ಕಂಠನಾದ ಆ ಪ್ರಾಂತದಲ್ಲೆಲ್ಲಾ ಪ್ರತಿಧ್ವನಿ ಸಿತು. ಮರುಕ್ಷಣವೇ ಚತುರ್ನೇತ್ರನು ತನ್ನ ಟೋಪಿಯನ್ನು ಕೈಯಲ್ಲಿ ಹಿಡಿದುಕೊಂಡು ಅವರಮುಂದೆ ಪ್ರತ್ಯಕ್ಷನಾದನು.

[ಇನ್ನೂ ಇದೆ]







# ಮನೆಯ ಆಡಳಿತ

ಹಿಂದೆ ಒಂದೂರಿನಲ್ಲಿ ದಂಡಪಾಣಿ ಎಂಬ ಒಬ್ಬ ಗೃಹಸ್ಥನಿದ್ದನು. ಆತನ ಹೆಂಡತಿಯ ಹೆಸರು ದೇವಮ್ಮ. ಅವರಿಗೆ ನಾಲ್ವರು ಕುಮಾರರು. ನಾಲ್ವರಿಗೂ ವಿವಾಹವಾಗಿ ಸೊಸೆಯರು ಸಂಸಾರಮಾಡಲು ಮನೆಗೆ ಬಂದರು.

ದೇವಮ್ಮ ಮನೆಯ ಆಡಳಿತವನ್ನು ತುಂಬಾ ಸಾಮರ್ಥ್ಯದಿಂದ ನೋಡಿಕೊಳ್ಳುತ್ತಿದ್ದಳು. ಆದರೆ ತನ್ನ ಅನಂತರ ನಾಲ್ವರು ಸೊಸೆಯರಲ್ಲಿ ತನ್ನ ಸ್ಥಾನಕ್ಕೆ ಬರಲು ಅರ್ಹರಾರೆಂದು ನಿರ್ಣಯಮಾಡುವುದು ಆಕೆಗೆ ಸಾಧ್ಯವಾಗದ ಮಾತಾಯಿತು. ಬರುಬರುತ್ತ ಅದೇ ಆಕೆಗೊಂದು ಭಾರೀ ಚಿಂತೆಯಾಯಿತು.

ತನ್ನ ಹೆಂಡತಿಯ ಚಿಂತೆಯನ್ನು ದಂಡಪಾಣಿ ಗ್ರಹಿಸಿ, ನಾಲ್ವರು ಸೊಸೆಯರನ್ನೂ ಪರೀಕ್ಷಿಸಲು ನಿರ್ಧರಿಸಿದ. ಆತನು ಒಬ್ಬೊಬ್ಬ ಸೊಸೆಯನ್ನೂ ಕರೆದು, ತಲಾ ಐದೈದು ಭತ್ತದ ಕಾಳನ್ನು ಕೊಟ್ಟು, "ನಾನು ಮತ್ತೆ ಕೇಳುವವರೆವಿಗೂ ಅದನ್ನು ಭದ್ರಪಡಿಸಿ" ಎಂದು ಎಚ್ಚರಿಕೆ ಕೊಟ್ಟ.

ಹಿರಿಸೊಸೆ ರಾಮುವ್ವ ಹೀಗೆ ಆಲೋಚಿಸಿದಳು: "ಮನೆ ತುಂಬಾ ಸದಾ ಧಾನ್ಯವಿದ್ದೇ ಇರುತ್ತದೆ. ಮಾವಂದಿರು ಯಾವ ಕ್ಷಣ ಕೇಳಿದರೂ ಐದು ಭತ್ತದ ಕಾಳುಗಳನ್ನು ಕಣಜದಿಂದ ತಂದು ಕೊಡಬಹುದು. ಈ ಭಾಗ್ಯಕ್ಕೆ ಈ ಭತ್ತದ ಕಾಳುಗಳನ್ನು ಭದ್ರಪಡಿಸುವುದೇನು ಮಹಾ!" ಎಂದು ಮಾವಂದಿರು ಕೊಟ್ಟ ಐದು ಭತ್ತದ ಕಾಳುಗಳನ್ನು ಹೊರಗೆಸೆದಳು.

ಎರಡನೆಯ ಸೊಸೆ ಲಕುಮುವ್ವನೂ ಸಹ ರಾಮುವ್ವನಂತೆಯೇ ಯೋಚಿಸಿದಳು. ಆದರೆ ಆಕೆ ಭತ್ತದ ಕಾಳನ್ನು ಆಚೆಗೆಸೆಯದೆ, ಹೊಟ್ಟು ತೆಗೆದು ಬಾಯಿಯಲ್ಲಿ ಹಾಕಿಕೊಂಡಳು.

ಮೂರನೇಯಾಕೆ ಕಾಮುವ್ವ ಮಾವಂದಿರು ಕೊಟ್ಟ ಭತ್ತದ ಕಾಳುಗಳನ್ನು ಭದ್ರವಾಗಿ ಒಂದು ಪೊಟ್ಟಣದಲ್ಲಿ ಸುತ್ತಿ ತನ್ನ ಪೆಟ್ಟಿಗೆಯ ತಳಭಾಗದಲ್ಲಿ ಬಚ್ಚಿಟ್ಟಳು.

ನಾಲ್ಕನೇ ಸೊಸೆ ಶಾಂತವ್ವ ಈ ವಿಧವಾಗಿ ಆಲೋಚಿಸಿದಳು: 'ಮಾವಂದಿರು ಕೊಟ್ಟ ಈ ಬೀಜಗಳನ್ನು ಯಾವಾಗ ಕೇಳುವರೋ ಏನೋ

ಟಿ. ಶ್ಯಾಮಣ್ಣ




ತಿಳಿಯದು. ಭತ್ತವನ್ನು ಅಕ್ಕಿಮಾಡಲು, ಅಥವಾ ನಾಟಲು ಸಾಮಾನ್ಯವಾಗಿ ಭದ್ರಪಡಿಸುವುದುಂಟು. ಆದರೆ ಈ ಕೇವಲ ಐದು ಬೀಜಗಳನ್ನು ತಿನ್ನಲೆನ್ನುವುದು ಹಾಸ್ಯಾಸ್ಪದ. ಆದುದರಿಂದ ಇವುಗಳನ್ನು ಭದ್ರಪಡಿಸುವುದೆಂದರೆ ಸಕಾಲದಲ್ಲಿ ಬಿತ್ತು ಎಂದರ್ಥವಿರಬಹುದು!' ಹೀಗೆಂದುಕೊಂಡು ಶಾಂತವ್ವ ತನಗೆ ಮಾವಂದಿರು ಕೊಟ್ಟ ಭತ್ತದ ಕಾಳುಗಳನ್ನು ತೌರುಮನೆಗೆ ಕಳುಹಿಸಿ, ಗದ್ದೆಯಲ್ಲಿ ಬಿತ್ತನೆ ಮಾಡಿಸಿದಳು.

ಶಾಂತವ್ವನ ತೌರುಮನೆಯವರು ಆ ಐದು ಕಾಳುಗಳನ್ನು ಬಿತ್ತಿ, ಐದುತೆನೆ ಬೆಳೆಸಿದರು. ಪಸಲು ಬಂದಾಗ ಕೊಯ್ದರು. ಮಾರನೇಯ ವರ್ಷ ಕಾಳು ವಾಪಸು ಬೇಕೆಂದು ಸುದ್ಧಿ ಬರಲಿಲ್ಲ. ಆದುದರಿಂದ ಬಂದ ಪಸಲನ್ನೆಲ್ಲಾ ಬೀಜಗಳನ್ನಾಗಿ ಉಪಯೋಗಿಸಿ, ಮಾರನೇಯ ವರ್ಷ ಭತ್ತ ಬೆಳೆಸಿದರು. ಈ ರೀತಿ ಐದು ವರ್ಷಗಳು ಕಳೆದವು.

"ಏನೂಂದ್ರೆ, ನಾನು ಮುದುಕಳಾದೆ. ಇನ್ನು ಮನೆಯ ಆಡಳಿತ ನೋಡಿಕೊಳ್ಳಲು ನನ್ನಿಂದ ಸಾಧ್ಯವಿಲ್ಲ, ಸೊಸೆಯಂದಿರಲ್ಲಿ ಯಾರಿಗೆ ಈ ಜವಾಬ್ದಾರಿ ವಹಿಸಬೇಕೋ ಹೇಳುವೆನೆಂದು ಹೇಳಿ ಐದು ವರ್ಷವಾಯಿತು. ಇನ್ನಾದರೂ ಒಂದು ನಿರ್ಧಾರಕ್ಕೆ ಬನ್ನಿ" ಎಂದಳು ದೇವಮ್ಮ ಗಂಡನೊಂದಿಗೆ.

ದಂಡಪಾಣಿ "ಸರಿ" ಎಂದು ಹೇಳಿ ತಾನು ಜೋಪಾನವಾಗಿಡುವಂತೆ ಕೊಟ್ಟ ಐದೈದು ಭತ್ತದ ಕಾಳುಗಳನ್ನು ಮತ್ತೆ ತರುವಂತೆ ಸೊಸೆಯಂದಿರಿಗೆ ಹೇಳಿದ. ಹಿರಿಯಸೊಸೆ ರಾಮವ್ವ ಮತ್ತು ಲಕುಮವ್ವ ಕಣಜದಿಂದ ತಲಾ ಐದೈದು ಕಾಳುಗಳನ್ನು ತಂದು ಮಾವನ ಮುಂದಿಟ್ಟರು. ಮೂರನೇ ಸೊಸೆ ಕಾಮವ್ವ ತನ್ನ ಪೆಟ್ಟಿಗೆಯ ತಳಬಾಗದಲ್ಲಿಟ್ಟಿದ್ದ ಕಪ್ಪಗಾದ ಬತ್ತದಕಾಳುಗಳನ್ನು ತಂದು ಮಾವನ ಮುಂದಿಟ್ಟಳು.

ದಂಡಪಾಣಿ ಅವುಗಳನ್ನು ನೋಡಿ "ಇವು ನಿಜವಾಗಿ ನಾನು ಕೊಟ್ಟವೇ?" ಎಂದು ಸಂದೇಹದಿಂದ ಕೇಳಿದ. ರಾಮವ್ವ ಲಕುಮವ್ವ ತಂದಿಟ್ಟ ಭತ್ತದ ಕಾಳುಗಳು ಹೊಸ ಬೆಳೆಯುದಾಗಿದ್ದು ಬಂಗಾರದ ಬಣ್ಣದಲ್ಲಿದ್ದವು. "ಇವು ನಾನು ಕೊಟ್ಟ ಬೀಜಗಳಲ್ಲ. ಏನಾಯಿತು

ನಿಜ ನುಡಿಯಿರಿ" ಎಂದು ಅವರನ್ನು ಕೇಳಿದ ದಂಡಪಾಣಿ. ಅವರು ಗತ್ಯಂತರವಿಲ್ಲದೆ ತಾವು ಮಾಡಿದ ಕೆಲಸ ತಿಳಿಸಿದರು.

ದಂಡಪಾಣಿ ಕಿರಿಯಸೊಸೆ ಶಾಂತವ್ವನನ್ನು ಕುರಿತು "ಎಲ್ಲಮ್ಮಾ, ನಾನು ಜೋಪಾನವಾಗಿಡುವಂತೆ ಕೊಟ್ಟ ಭತ್ತದಕಾಳುಗಳು?" ಎಂದು ಕೇಳಿದ.

"ಅವುಗಳನ್ನು ನಮ್ಮ ತೌರು ಮನೆಗೆ ಕಳುಹಿಸಿರುವೆನು. ಎರಡು ದಿನ ಅವಕಾಶ ಕೊಡಿ" ಎಂದು ವಿನಯಪೂರ್ವಕವಾಗಿ ಕೇಳಿಕೊಂಡಳು ಶಾಂತವ್ವ. "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡ ದಂಡಪಾಣಿ.

ಎರಡು ದಿನಗಳಿಗೆಲ್ಲಾ ಶಾಂತವ್ವನ ತೌರು ಮನೆಯಿದ್ದ ಊರಿನಿಂದ ಐವತ್ತುಗಾಡಿ ಭತ್ತ ಬಂದು ದಂಡಪಾಣಿ ಮನೆಮುಂದೆ ಇಳಿಯಿತು. ಅದನ್ನು ಕಂಡು ಎಲ್ಲರೂ ಬೆರಗಾದರು.

ಐದು ವರ್ಷಗಳ ಹಿಂದೆ ಐದು ಕಾಳುಗಳನ್ನು ಸರಿಯಾಗಿ ಭದ್ರಪಡಿಸಿದುದರಿಂದ ಈಗ ಐವತ್ತುಗಾಡಿ ಭತ್ತ ಸಿದ್ಧವಾಯಿತು. "ನೋಡಿದೆಯಾ? ಮನೆಯ ಯಜಮಾನಿಕೆಯನ್ನು ಶಾಂತವ್ವನಿಗೆ ಕೊಡು. ಯಾವುದನ್ನು ಹೇಗೆ ಭದ್ರಪಡಿಸಬೇಕೋ ಆಕೆಗೆ ತಿಳಿದಿದೆ" ಎಂದು ದಂಡಪಾಣಿ ಹೆಂಡತಿಗೆ ಹೇಳಿದ.

"ಉಳಿದ ಮೂವರ ಮಾತೇನು? ಅವರಿಗೂ ಏನಾದರೂ ಕೆಲಸ ಕೊಡಬೇಡವೇ?" ಎಂದಳು ದೇವಮ್ಮ.

"ರಾಮವ್ವ ಕೆಲಸಕ್ಕೆ ಬಾರದ ವಸ್ತುಗಳನ್ನು ಆಚೆಗೆ ಬಿಸಾಡುವಾಕೆ. ಕಸಗಿಸ ಗುಡಿಸಿ ಮನೆ ಚೊಕ್ಕಟವಾಗಿಡುವ ಕೆಲಸ ಆಕೆಗೆ ವಹಿಸು. ಲಕುಮವ್ವ ಕೈಗೆ ಬಂದುದನ್ನು ಅನುಭವಿಸುವ ತರಹೆಯವಳು. ಆಕೆಗೆ ಪಾಕಶಾಲೆಯ ಯಜಮಾನಿಕೆ ಮಾಡು. ಕಾಮವ್ವ ಪ್ರತಿವಸ್ತುವನ್ನೂ ಜೋಪಾನವಾಗಿ ಕಾಪಾಡಬಲ್ಲಳು. ಉಗ್ರಾಣದ ಜವಾಬ್ದಾರಿ ಆಕೆ ಸೊಗುಸಾಗಿ ವಹಿಸುವಳು" ಎಂದ.

ದೇವಮ್ಮ ಅದೇ ಪ್ರಕಾರ ತನ್ನ ಸೊಸೆಯರಿಗೆ ಕೆಲಸಗಳನ್ನು ಹಂಚಿ ತಾನು ಮನೆಯ ಯಜಮಾನಿಕೆಯಿಂದ ವಿರಮಿಸಿ ರಾಮನಾಮ ಧ್ಯಾನಮಾಡುತ್ತಾ ತನ್ನ ಜೀವನವನ್ನು ನೆಮ್ಮದಿಯಾಗಿ ಕಳೆಯಹತ್ತಿದಳು.



## ಕೃಷ್ಣನಮೋ

ಮಧುರೆಯಲ್ಲಿ ಹುಟ್ಟಿದಾತ
ದೇವಕೀಯ ಕಂದನವನು
ಕಾಳಿಂಗನ ತಲೆಯ ಮೆಟ್ಟಿ
ಪಶುಗಳನ್ನು ಕ್ಯಾದ ಗೊಲ್ಲ
ಪೂತನೀಯು ಪಾಲನುಂಡು
ಮಾರಿಯವಳ ಕೊಂದ ವೀರ
ಗೋಪಿಯರಾ ಮನೆಯ ನುಗ್ಗಿ
ಕದ್ದು ಬೆಣ್ಣೆ ತಿಂದ ಕಳ್ಳ
ಕೊಳಲನೂದಿ ಮರದ ಬುಡದಿ
ಹರುಷದಿಂದ ನಲಿದ ಗೋಪ
ಮಾವ ಕಂಸಾಸುರನ ಕೊಂದು
ಧರೆಗೆ ಶಾಂತಿ ನೀಡಿದವನು
ವೀರ ವಿಜಯ ಧುರವನಿಲಿಸೆ
ತತ್ವಬೋಧೆ ಮಾಡಿದಾತ
ಪಾಂಡವರ ಭಾವನಾಗಿ
ತನ್ನ ಮಹಿಮೆ ಬೀರಿದಾತ
ಕೌರವರಾ ನಾಶಗೈದು
ಲೀಲೆಯನ್ನು ಅಲ್ಲಿ ತೋರ್ದ
ಗೀತೆಯನ್ನು ನಮಗೆ ನೀಡಿ
ನೀತಿ ಬೋಧೆ ಮಾಡಿದಾತ
ನರಕಾಸುರ ವಧೆಯಗೈದು
ನಿರುತ ಸುಖವ ನೀಡಿದಾತ
ಪಾರಿಜಾತ ಪುಷ್ಪವನ್ನು
ತಂದುಕೊಟ್ಟ ವೀರಪುರುಷ
ಸರ್ವಶಕ್ತ ವಿಶ್ವರೂಪ
ವಿಶ್ವಪಾಲ ಕೃಷ್ಣನಮೋ!

—"ಶಂಪಾಜಿ" ಬೆಳ್ಳಾರೆ

## ಕಟ್ಟಿಬಲ್ಲವರಿಗೆ

ಕಳೆದ ತಿಂಗಳು ಕೊಟ್ಟಪದ ಕಟ್ಟಿದ್ದು:-
ಅಕ್ಕಿತರಲು ಅಂಗಡಿಗೆ
ಚಿಕ್ಕಹುಡುಗ ನಡೆಯುತಿರಲು
ಠಕ್ಕರವನ ಮುತ್ತಿದಾಗ
ಬಿಕ್ಕಿಬಿಕ್ಕಿ ಹುಡುಗನತ್ತ
ದನಿಯ ಕೇಳಿ ಬಡಿಗೆಬೀರ
ಚಣದಿಯೋಡಿ ಯವನಾಕ್ರಂ
ದನವಂ ಸೀಳುತ್ತೆ ಗರ್ಜಿಸಿದ ಹೆದ್ದನಿಯಿಂ.

—"ಜಲಜಾ"

ಮುಂದಿನ ತಿಂಗಳಿಗೆ:

**ಕಳಕೊಂಡಾಡಿದರು ಹಳ್ಳಿಮಂದಿಗಳೆಲ್ಲ**

(ಈ ಕಡೆಯ ಪಾದಕ್ಕೆ ಸರಿಯಾದ ಅರ್ಥ ಬರುವಂತೆ ಒಂದು ಪದ್ಯದ ಸೊಲ್ಲಾಗಿ ಕಟ್ಟಿ ಆಗಸ್ಟು 5 ನೇ ತಾರೀಕಿನೊಳಗೆ ಕಳಿಸಬೇಕು. ಉತ್ತಮವಿದ್ದುದನ್ನು ಮುಂದಿನ ತಿಂಗಳಿನಲ್ಲಿ ಪ್ರಕಟಿಸುತ್ತೇವೆ.)

## ಚುಟಿಕಗಳು

ಬಣ್ಣದ ಬೊಂಬೆಯ ನಾತಂದೆ,
ಹೋಲಿಕೆಯೆಲ್ಲಾ ನಂದೆ.
ಮುದ್ದಿನ ಬೊಂಬೆ ಬಿದ್ದೋಯ್ತು ಹಿಂದೆ
ಅಳುತ್ತ ಮನೆಗೇ ಬಂದೆ.

—ಜಿ. ಜಿ. ಹೆಗಡೆ

ಸೇರವಲಕ್ಕಿಯ ಪಕಾಪಕಾ
ತಿಂದನು ಆದರೆ ಏನು ಸುಖಾ?
ನೀರನು ಕುಡಿದು ಹೊಟ್ಟೆಯುಬ್ಬರಿಸಿ
ಕಾರಿದನೆಲ್ಲಾ ಬಕಾಬಕಾ!

—ಎಂ. ಎ. ಸನದಿ




# ನೀತಿ ತಪ್ಪಿದವನು

**ಪೂ**ರ್ವಕಾಲದಲ್ಲಿ ಒಂದಾನೊಂದು ಸಾರಿ ಮಣಿಪುರ ರಾಜ್ಯವನ್ನು ಶಶಾಂಕನೆಂಬ ರಾಜನು ಆಳುತ್ತಿದ್ದನು. ಆತನು ತನ್ನ ರಾಜ್ಯದಲ್ಲಿ ಧರ್ಮವನ್ನು ನಾಲ್ಕು ಪಾದಗಳಮೇಲೆ ಸ್ಥಿರವಾಗಿ ನೆಲೆಗೊಳಿಸಿ ಪಾಲಿಸುತ್ತಿದ್ದನು. ಆದರೆ ಶಶಾಂಕನಿಗೆ ಒಂದು ಚಿಂತೆ ಹಿಡಿಯಿತು. ತನ್ನ ರಾಜ್ಯದಲ್ಲಿ ಧರ್ಮ ನೆಲೆಸಿದ್ದರೂಸಹ ಯಾರೂ ಸಂತೋಷದಿಂದಿರುವಂತೆ ತೋರಲಿಲ್ಲ. ಮುಂಜಾನೆಯಿಂದ ಸಂಜೆಯವರೆವಿಗೂ ಜನರು ತಮ್ಮತಮ್ಮ ಕೆಲಸಗಳಲ್ಲಿ ನಿರತರಾಗಿರುತ್ತಿದ್ದರು. ಆದರೆ ಯಾರ ಮುಖದಲ್ಲೂ ಗೆಲುವು ಕಾಣಬರುತ್ತಿರಲಿಲ್ಲ.

"ಈ ಪ್ರಜೆಗಳನ್ನು ಹೇಗೆ ಹರ್ಷಚಿತ್ತರನ್ನಾಗಿ ಮಾಡಲಿ?" ಎಂದು ಶಶಾಂಕನು ಎಷ್ಟೋ ಪ್ರಯತ್ನಗಳನ್ನುಮಾಡುತ್ತಿದ್ದ. ಏನು ಮಾಡಿದರೂ ಲಾಭವಿಲ್ಲದಾಯಿತು. ರಾಜನಿಗೆ ಬೇಸರುಂಟಾಯಿತು. ಮಂತ್ರಿಗೆ ಎರಡು ದಿನ ಗಡುವಿತ್ತು ಆ ಅವಧಿ ಯೊಳಗೆ ಪ್ರಜೆಗಳೆಲ್ಲರ ಮುಖದಲ್ಲಿ ಗೆಲುವು ತೋರುವಂತೆ ಮಾಡದಿದ್ದರೆ ಆತನ ಕುತ್ತಿಗೆಯಮೇಲೆ ತಲೆ ಯಿರಲು ಅರ್ಹತೆ ಯಿಲ್ಲವೆಂದು ತಿಳಿಸಿಬಿಟ್ಟ ರಾಜ.

ಮಂತ್ರಿಗೆ ಏನೂ ತೋರದೆ ಕಾಡಿಗೆ ಓಡಿದ. ದಾರಿಯಲ್ಲಿ ಆತನಿಗೆ ಒಬ್ಬ ಮುನೀಶ್ವರನು ಕಾಣಿಸಿದ. ಮಂತ್ರಿ ಆತನಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಕಷ್ಟನಿವಾರಣೆ ಮಾಡಬಹುದೆಂದು ಯೋಚಿಸಿ, ಆ ಋಷಿಯನ್ನು ರಾಜನ ಅರಮನೆಗೆ ಕರೆತಂದ. ರಾಜನು ಮುನೀಶ್ವರನಿಗೆ ಸಕಲ ಮರ್ಯಾದೆಗಳನ್ನು ಮಾಡಿ ಇಂತೆಂದನು :

"ಮುನಿವರ್ಯರೇ, ನಮ್ಮ ರಾಜ್ಯದಲ್ಲಿ ಯಾರಿಗೂ ಸಂತೋಷವೆಂಬುದೇ ಇಲ್ಲ. ಆದುದರಿಂದ ನನಗೆ ಆನಂದವೇ ಇಲ್ಲ. ಮಹಾತ್ಮರೇ, ನಮಗೆ ಈ ಜನ್ಮದಲ್ಲಿ ಸಂತೋಷವಾಗಿರುವ ಭಾಗ್ಯವೇ ಇಲ್ಲವೇ?" ಎಂದು ಕೇಳಿದ. ಅದಕ್ಕೆ ಮುನೀಶ್ವರನು "ಇಲ್ಲವೆಂದರೇನು ಮಹಾರಾಜ. ನಿನ್ನ ರಾಜ್ಯದಲ್ಲಿ ಯಾರಾದರೊಬ್ಬರು ನೀತಿ ನಿಯಮ ತಪ್ಪಿದರೆ, ಆನಂತರ ರಾಜ್ಯದಲ್ಲಿ ಸಂತೋಷವು

ಆರ್. ಶಂಭುದಾಸ




ತಾನೇ ತಾನಾಗಿ ಹರಡುತ್ತದೆ" ಎಂದು ಹೇಳಿ ತನ್ನ ನಿವಾಸಕ್ಕೆ ಹೊರಟುಹೋದ.

ಆ ಮಾತು ಕೇಳಿ ರಾಜನೂ, ಮಂತ್ರಿಯೂ ಅನೇಕ ಪ್ರಯತ್ನಗಳನ್ನು ಮಾಡಿದರು. ಆದರೆ ಪ್ರಜೆಗಳಲ್ಲಿ ಯಾರೂ ಧರ್ಮದದಾರಿಯನ್ನು ಬಿಡುವಂತೆ ತೋರಲಿಲ್ಲ.

ಒಂದು ದಿನ ಬೆಳಗಿನಜಾವ ರಾಣಿ ಕಿರು ನಗೆ ಬೀರುತ್ತ ಎದ್ದು ಬಂದು ಶಶಾಂಕನನ್ನು ಎಬ್ಬಿಸಿದಳು. ಮಂದಹಾಸದಿಂದ ಇದ್ದ ಹೆಂಡತಿಯನ್ನು ಕಂಡು ರಾಜನು ತತ್‌ಕ್ಷಣ ಹಾಸಿಗೆಯಿಂದ ಎದ್ದ. ಹೊರಗೆ ಬರುವವೇಳೆಗೆ ಸೇನಾಧಿಪತಿ, ಮತ್ತು ಮಂತ್ರಿ ಮಾತನಾಡುತ್ತಾ ಗೊಳ್ಳನೆ ನಗುತ್ತಾ ಇದ್ದಾರೆ! ಪ್ರಜೆಗಳನ್ನು ನೋಡಲು, ಅವರ ಮುಖದಲ್ಲಿ ಸಂತೋಷ ತುಂಬಿ ತುಳುಕಾಡುತಿತ್ತು. ಇದರಿಂದ ರಾಜನ ಮನಸ್ಸಿಗೆ ಶಾಂತಿಯುಂಟಾಯಿತು. ಮಂತ್ರಿಯನ್ನು ಕರೆದು "ರಾಜ್ಯದಲ್ಲಿ ಯಾರು ನೀತಿನಿಯಮವನ್ನು ತಪ್ಪಿದರೋ ಅವರನ್ನು ಬರಮಾಡಿ ಅವರಿಗೆ ಅರ್ಧರಾಜ್ಯ ಬಹುಮಾನವಾಗಿ ಕೊಡು" ಎಂದು ಆಜ್ಞಾಪಿಸಿದ. ಮಂತ್ರಿ ರಾಜ್ಯದಲ್ಲೆಲ್ಲಾ ಹುಡುಕಿದ. ಯಾರೂ ನೀತಿತಪ್ಪಿದಂತೆ ತೋರಲಿಲ್ಲ.

ಶಶಾಂಕನು ವಿದೂಷಕನಿಗೆ ಹೇಳಿ ಕಳುಹಿಸಿದ. "ನೀನು ಇಷ್ಟು ದಿನವೂ ನಮ್ಮ ಸೊತ್ತು ತಿನ್ನುತ್ತಾ ಕುಳಿತಿದ್ದೆ. ಆದರೆ ನಮ್ಮನ್ನು ನಗಿಸುವ ಗೋಜಿಗೇ ಹೋಗಲಿಲ್ಲ. ನಮ್ಮ ರಾಜ್ಯಕ್ಕೆ ನಿನ್ನೆ ಒಬ್ಬ ಮುನೀಶ್ವರನು ಬಂದನು. ಆತನು ಬಂದಾಗಲಿಂದ ನಮ್ಮ ಪ್ರಜೆಗಳಿಗೆ ಸಂತೋಷ ಬಂತು. ಗೆಲುವು ಬಂತು. ನೀನೀಗಲೇ ಆತನ ಹತ್ತಿರಕ್ಕೆ ಹೋಗಿ ಇದರ ರಹಸ್ಯವನ್ನು ತಿಳಿದುಕೊಂಡು ಬಾ" ಎಂದು ವಿದೂಷಕನನ್ನು ಕಳುಹಿಸಿದ.

ವಿದೂಷಕನು ಹೋಗಿ ದಿನ, ವಾರಗಳು ಕಳೆದವು. ಆತನು ಮತ್ತೆ ಹಿಂತಿರುಗಿ ಬರುವ ಸೂಚನೆ ಕಾಣಿಸದಾಯಿತು. ಮಂತ್ರಿಯನ್ನು ಕಳುಹಿಸಿದ ರಾಜ. ಆತನೂ ಸಹ ಅನೇಕ ದಿನಗಳಾದರೂ ಹಿಂತಿರುಗಿ ಬರಲಿಲ್ಲ.

ಆದುದರಿಂದ ರಾಜನು ಸ್ವತಃ ಹೊರಟು ಮುನೀಶ್ವರನ ಆಶ್ರಮವನ್ನು ತಲುಪಿದ. ಉಳಿದವರಂತೆ ರಾಜನೂ ಎಷ್ಟು ದಿನವಾದರೂ ಹಿಂತಿರುಗಿಬರಲಿಲ್ಲ. ರಾಜನು

ಹಿಂತಿರುಗಿ ಬಾರದಿರುವುದನ್ನು ಕಂಡು ರಾಣಿ ಹೆದರಿದಳು. ಯುವರಾಜನನ್ನು ಅಲ್ಲಿಗೆ ಕಳುಹಿಸುವ ಉದ್ದೇಶವಿತ್ತು ಆಕೆಗೆ. ಆದರೆ ಇದ್ದ ಒಬ್ಬನೇಒಬ್ಬ ಮಗನನ್ನು ಕಳುಹಿಸಿಬಿಟ್ಟರೆ ರಾಜ್ಯಕ್ಕೆ ವಾರಸುದಾರರು ಯಾರೂ ಇರುವುದಿಲ್ಲವೆಂದು ಆಕೆ ತುಸ ಹಿಂತೆಗೆದಳು. ಇದೇ ಯೋಚನೆಯಿಂದ ಆಕೆ ಕಳವಳಚಿತ್ತಳಾದಳು.

ಮಣಿಪುರರಾಜ್ಯಕ್ಕೆ ಪಕ್ಕದಲ್ಲೇ ಒಂದು ಸಾಮಂತರಾಜ್ಯವಿತ್ತು. ಆ ಸಾಮಂತರಾಜನು ತುಂಬಾ ಬಲಶಾಲಿ. ಸಮಯ ಸಿಕ್ಕಿದರೆ ಶಶಾಂಕನಮೇಲೆ ಬೀಳಲು ಹವಣಿಸುತ್ತಿದ್ದನು. ಈಗ ಆ ಸುಸಮಯ ಒದಗಿಬಂದಿತೆಂದು ಭಾವಿಸಿ, ತನ್ನ ಸೇನೆಯೊಂದಿಗೆ ಮಣಿಪುರದ ಮೇಲೆ ದಂಡೆತ್ತಿಬಂದ.

ಬೇರೇನೂ ಮಾಡಲಾರದೆ ರಾಣಿ ತಂದೆಯನ್ನು ಕರೆದುಕೊಂಡು ಬರುವಂತೆ ಮಗನನ್ನು ಕಳುಹಿಸಿದಳು. ಯುವರಾಜನು ಮುನೀಶ್ವರನ ಆಶ್ರಮಕ್ಕೆ ಹೋದ. ಅಲ್ಲಿ ರಾಜನೂ, ಮುನೀಶ್ವರನೂ ಚದುರಂಗವಾಡುತ್ತಿದ್ದಾರೆ! ಸೋತುಹೋದ ಮಂತ್ರಿ, ವಿದೂಷಕರು ಸಪ್ಪೆಮೋರೆ ಹಾಕಿಕೊಂಡು ಆಟ ನೋಡುತ್ತಿದ್ದಾರೆ!!

ಯುವರಾಜನು ಆತುರದಿಂದ ಸಂಗತಿ ಸಂದರ್ಭಗಳನ್ನು ಹೇಳಿ, ಕೂಡಲೇ ಹೊರಡುವಂತೆ ತಂದೆಯನ್ನು ಅವಸರಪಡಿಸಿದ. ಆದರೆ ರಾಜನು "ಮತ್ತೆರಡು ಆಟ ಆಡಿದಹೊರತು ಇಲ್ಲಿಂದ ಕದಲಲಾರೆ" ಎಂದ. ತಂದೆಯ




ಸ್ಥಿತಿ ನೋಡಿದರೆ ಎದ್ದುಬರುವಂತೆ ಕಾಣಿಸಲಿಲ್ಲ. ಶತ್ರುಗಳು ಕೋಟೆಯನ್ನು ಸುತ್ತುವರಿದಿದ್ದಾರೆ. ಆದುದರಿಂದ ತಾನೇ ಸೈನ್ಯವನ್ನು ತೆಗೆದುಕೊಂಡು ಹೋಗಿ ಶತ್ರುವಿನ ಮೇಲೆ ಬೀಳಲು ನಿರ್ಧರಿಸಿದ.

ಆ ಸಾಮಂತರಾಜನದು ಭಾರಿ ಸೈನ್ಯ. ಆತನು ಪರಾಕ್ರಮಿಯೂ ಹೌದು. ಆದುದರಿಂದ ಆತನು ಯುವರಾಜನನ್ನು ಲೀಲಾಜಾಲವಾಗಿ ಸೋಲಿಸಿ, ಸೆರೆಹಿಡಿದ. ಸೆರೆಸಿಗದೆ ತಪ್ಪಿಸಿಕೊಂಡ ಕೆಲವು ಮಣಿಪುರದ ಸೈನಿಕರು ಶಶಾಂಕನ ಹತ್ತಿರ ಹೋಗಿ ಯುವರಾಜನಿಗೊದಗಿದ ಸ್ಥಿತಿಯನ್ನು ತಿಳಿಸಿದರು. ಈ ಸುದ್ದಿ ಕಿವಿಗೆ ಬಿದ್ದಕೂಡಲೇ ರಾಜನು ಕೋಪದಿಂದ ತಪ್ತನಾದ. ಸೈನ್ಯವನ್ನು ಜೊತೆ

ಮಾಡಿ ಶತ್ರುರಾಜನನ್ನು ಎದುರಿಸಿದನು. ಶಶಾಂಕನ ಯುದ್ಧನೈಪುಣ್ಯವನ್ನು ಕಂಡು ಆ ಸಾಮಂತರಾಜನಿಗೆ ಹೆದರಿಕೆಯುಂಟಾಯಿತು. ಅವನು ರಣರಂಗದಿಂದ ಕಾಲುತೆಗೆದ. ಕೂಡಲೇ ಶಶಾಂಕನು ಮಗನನ್ನು ಸೆರೆಯಿಂದ ಬಿಡಿಸಿ, ತನ್ನ ನಗರವನ್ನು ಸೇರಿಕೊಂಡ.

ರಾಜನು ದರ್ಬಾರನ್ನು ಏರ್ಪಡಿಸಿ, ಮುನೀಶ್ವರನಿಗೆ ಅರ್ಧರಾಜ್ಯ ಕೊಡ ಹೋಗಲು, ಆತನು "ಎಲೈ ರಾಜನೇ, ಐಹಿಕ ಆಶೆಗಳನ್ನು ತೊರೆದ ನಮಗೆ ಈ ರಾಜ್ಯ ವೇಕೆ?" ಎಂದನು.

ತರುವಾಯ ತಮ್ಮ ಕರ್ತವ್ಯವನ್ನು ಮರೆತು ಚದುರಂಗವಾಡುತ್ತಾ ಕುಳಿತಿದ್ದ ಮಂತ್ರಿ ಮತ್ತು ವಿದೂಷಕರಿಗೆ ಪಾಸಿಶಿಕ್ಷೆ ವಿಧಿಸಿದ. ಮಂತ್ರಿಗೆ ಜಂಘಾಬಲ ಉಡುಗಿತು. ವಿದೂಷಕ ತತ್ತರಿಸಿದ. ಆದರೆ ಬುದ್ಧಿವಂತ ನಾದ ಮಂತ್ರಿ ಸ್ವಲ್ಪಹೊತ್ತಿಗೆಲ್ಲಾ ಚೇತರಿಸಿ ಕೊಂಡು "ಮಹಾರಾಜಾ, ನಮ್ಮ ಕರ್ತವ್ಯ ವನ್ನು ಮರೆತು ನಾವು ಜೂಜಾಟದಲ್ಲಿ ಮುಳು ಗಿದ್ದುದೇನೋ ತಪ್ಪೇಸರಿ. ಆದರೆ ಪ್ರಭುಗಳು ಒಂದು ವಿಷಯ ಆಲೋಚಿಸಬೇಕೆಂದು ಮನವಿ. ರಾಜನು ಪ್ರಜೆಗಳಿಗೆ ತಂದೆಸಮಾನನು. ಇದನ್ನು ರಕ್ಷಿಸಬೇಕಾದ ಬಾಧ್ಯತೆ ನಮ್ಮಿಬ್ಬರಿ ಗಿಂತಲೂ ಪ್ರಭುಗಳದೇ ಹೆಚ್ಚಷ್ಟೇ?"

ಈ ಮಾತು ಕೇಳಿ ರಾಜನು ದಂಗಾದ. ಕೂಡಲೇ ಅವರ ತಪ್ಪುಗಳನ್ನು ಕ್ಷಮಿಸಿದೆ ವೆಂದು ಪ್ರಕಟಿಸಿದ. ಇನ್ನುಮುಂದೆ ಯಾರೂ ಈ ರೀತಿ ಚದುರಂಗವನ್ನು ಆಡಕೂಡದೆಂದು ಆಜ್ಞಾಪಿಸಿದ. "ಹಾಗಾದರೆ ನಮ್ಮ ರಾಜ್ಯ ದಲ್ಲಿ ಸಂತೋಷವೆಂಬುದು ಹೇಗೆ ಬರುವುದು ಮಹಾಪ್ರಭೂ" ಎಂದು ಕೇಳಿದ ಮಂತ್ರಿ. ರಾಜನಿಗೆ ಒಂದು ಆಲೋಚನೆ ಹೊಳೆಯಿತು. ಆಪ್ರಕಾರ ಮಾಡಿದರೆ ರಾಜ್ಯದಲ್ಲಿ ನಿತ್ಯವೂ ಸಂತೋಷ ವಿರುವುದೆಂದು ಭಾವಿಸಿದ.

ಮಾರನೇಯದಿನವೇ ಯುವರಾಜನಿಗೆ ಪಟ್ಟಾಭಿಷೇಕ ಮಾಡಿದರು. ಶಶಾಂಕನು ಹೆಂಡತಿಯೊಂದಿಗೆ ಅಂತಃಪುರದಲ್ಲಿ ಚದುರಂಗ ಆಡುತ್ತಾ ಕುಳಿತುಕೊಂಡ. ರಾಜ್ಯಪಾಲನೆ ಸುಗುಮವಾಗಿ ಸುಗುತಿತ್ತು. ರಾಜ್ಯದಲ್ಲಿ ಸಂತೋಷವೇರ್ಪಟ್ಟಿತು.






# ಬೇಡರವನ ಎದೆಗಾರಿಕೆ

ಒಂದಾನೊಂದು ಕಾಲದಲ್ಲಿ ಪಾರ್ವತಿ ಪರಮೇಶ್ವರರು ವಿಹಾರಾರ್ಥವಾಗಿ ಕಾಶಿಪಟ್ಟಣವನ್ನು ಹಾದು ಹೋಗುತ್ತಿದ್ದರು. ಅಲ್ಲಿ ಲಕ್ಷಾಂತರ ಜನ ವಿಶ್ವೇಶ್ವರನನ್ನು ಸಂದರ್ಶಿಸುತ್ತಿದ್ದರು. ಕಾಣಿಕೆ ಸಲ್ಲಿಸುತ್ತಿದ್ದರು. ಭಜನೆ ಮಾಡುತ್ತಿದ್ದರು.

ಇದೆಲ್ಲವನ್ನೂ ನೋಡಿ ಪಾರ್ವತಿದೇವಿ "ನಾಥಾ, ಪ್ರತಿದಿನ ನಿಮ್ಮನ್ನು ಸೇವಿಸಲು ಇಷ್ಟೊಂದು ಜನ ಈ ಕಾಶಿಪಟ್ಟಣಕ್ಕೆ ಬರುತ್ತಾರೆ. ಇವರೆಲ್ಲರೂ ನಿಮ್ಮ ಸಾನಿಧ್ಯವನ್ನು ಪಡೆಯುವರೇ? ಇಷ್ಟು ಜನವೂ ಕೈಲಾಸಕ್ಕೆ ಬಂದರೆ ಕೈಲಾಸದಲ್ಲಿ ಸ್ಥಳ ಸಾಕಾಗುವುದೇ?" ಎಂದು ಗಂಡನನ್ನು ಕೇಳಿದಳು.

ಅದಕ್ಕೆ ಪರಮಶಿವನು "ಎಲೈ ಅಮಾಯಕಳೇ, ಕಾಶಿಗೆ ಬಂದ ಪ್ರತಿಯೊಬ್ಬನೂ ಕೈಲಾಸ ಸೇರುವನೆಂದು ನೀನು ಭಾವಿಸುವೆಯಾ? ಪುಣ್ಯಕ್ಷೇತ್ರಗಳನ್ನು ಸಂದರ್ಶಿಸದಿದ್ದರೂ ನನ್ನ ಸಾನಿಧ್ಯಹೊಂದಬಹುದು. ನನ್ನ ಸನ್ನಿಧಿಗೆ ಬರಲು ಅರ್ಹನಾದವನು ಯಾರೋ ನಿನಗೀಗ ತೋರಿಸುವೆನು" ಎಂದ.

* * *

ಪಾರ್ವತಿ ಪರಮೇಶ್ವರರು ವೃದ್ಧದಂಪತಿಗಳ ರೂಪದಲ್ಲಿ ವಿಶ್ವೇಶ್ವರನ ಗುಡಿಯ ಹತ್ತಿರ ಸೇರಿ, ಅಲ್ಲೊಂದು ಆಲದ ಮರದಕೆಳಗೆ ಕುಳಿತರು. ಅವಸಾನ ದೆಶೆಯಲ್ಲಿರುವ ವೃದ್ಧನಂತೆ ಶಿವನು ಬಾಧೆಪಡ ತೊಡಗಿದನು.

ವಿಶ್ವೇಶ್ವರನ ದರ್ಶನಕ್ಕೆ ಎಷ್ಟೋ ಜನ ಭಕ್ತರು ಎಲ್ಲೆಲ್ಲಿಂದಲೋ ಬರುತ್ತಿದ್ದಾರೆ. ಅವರಲ್ಲಿ ಅನೇಕರು ಈ ವೃದ್ಧ ದಂಪತಿಗಳ ಕಡೆಯೇ ನೋಡಲಿಲ್ಲ. ಕೆಲವರು ನೋಡಿಯೂ ನೋಡದವರಂತೆ ಜಾರಿಕೊಂಡರು. ಮತ್ತೆ ಕೆಲವರು ಅವರನ್ನು ನೋಡಿ ಅಸಹ್ಯಪಟ್ಟುಕೊಂಡು ಹೊರಟುಹೋದರು.

ಇಷ್ಟರಲ್ಲಿ ಒಬ್ಬನು ಮಾತ್ರ ಬಂದ. ಆತನನ್ನು ನೋಡಿ ವೃದ್ಧಳು "ಅಣ್ಣಾ, ಇವರು ನನ್ನ ಪತಿ. ಈಗಲೋ ಆಗಲೋ ಸಾಯುವ ಸ್ಥಿತಿಯಲ್ಲಿದ್ದಾರೆ. ಬಾಯಲ್ಲಿ ಒಂದಿಷ್ಟು ನೀರು ಸುರಿದು ಪುಣ್ಯಕಟ್ಟಿಕೋ ಅಪ್ಪಾ" ಎಂದು

ಕೆ. ರುಕ್ಮಿಣಮ್ಮ




ಕಲ್ಲೂ ಕರುಗುವಂತೆ ಅಂಗಲಾಚಿದಳು. ಅದಕ್ಕೆ ಆ ಯಾತ್ರಿಕನು ಜಿಗುಪ್ಸೆಗೊಂಡು "ಎಲ್ಲಿ ನೋಡಿದರೂ ಈ ಹಾಳಾದ ಬಿಕ್ಷುಕರು. ನಿಮಗೆಲ್ಲಾ ನೀರು ಹಾಕುತ್ತಾ ಕುಳಿತಿದ್ದರೆ ಸಾರ್ಥಕವಾದಂತೆಯೇ! ಬೊಗಸೆ ಹಣ ಖರ್ಚು ಮಾಡಿಕೊಂಡು ಇಲ್ಲಿಗೆ ಬಂದಿದ್ದು ನಿಮ್ಮಗಳ ಬಾಯಿಗೆ ನೀರು ಹಾಕಲೇ?" ಎಂದು ಹೇಳಿ, ಅಲ್ಲಿಂದ ಹೊರಟುಹೋದ.

ಮತ್ತೆ ಸ್ವಲ್ಪ ಹೊತ್ತಾದನಂತರ ಒಬ್ಬ ಭಕ್ತವರ್ಯನು ಬಂದ. ವೃದ್ಧಳು ಪ್ರಾರ್ಥಿಸಿದಕೂಡಲೇ ಮರುಕಗೊಂಡು, ಗಂಗಾ ತೀರ್ಥವನ್ನು ಬಾಯಿಗೆ ಸುರಿಯಲು ಸಿದ್ಧನಾದ. ಆದರೆ ಆ ವೃದ್ಧಳು "ಅಪ್ಪಾ, ನೀನು ಗಂಗಾಜಲವನ್ನು ಸುರಿದು, ನನ್ನ ಗಂಡನನ್ನು ಉಳಿಸುವ ಮುನ್ನ ಒಂದು ನಿಯಮವಿದೆ. ಕೇಳು. ನೀನು ಬುದ್ಧಿಬಂದ ತರುವಾಯ ಯಾವ ಪಾಪವನ್ನೂ ಮಾಡಿರಬಾರದು. ಹಾಗಾದರೆ ತೀರ್ಥವನ್ನು ಕೊಡು. ಸುಳ್ಳಾಡಬೇಡ. ನೀನು ಸುಳ್ಳಾಡಿದೆ ಎಂದರೆ ನನ್ನ ಪತಿ ತೀರಿಕೊಳ್ಳುವನು. ಆ ಪಾಪ ನಿನ್ನನ್ನು ಸುತ್ತಿಕೊಳ್ಳುತ್ತದೆ" ಎಂದಳು.

ಆ ಮಾತು ಕೇಳಿ ಆತನು 'ಒಪ್ಪೊತ್ತು ಕೂಳಿಗೆ ಗತಿಯಿಲ್ಲದವರಿಗೆ ನಿಯಮಗಳಂತೆ ನಿಯಮಗಳು! ಈ ಮುದುಕ ಮರಣಿಸಿದರೆ ಆ ಪಾಪ ನಿಷ್ಕಾರಣವಾಗಿ ನನಗೆ ಅಂಟಿಕೊಳ್ಳುವುದು. ಕಾಲುಚಾಚಿಕೊಂಡು ಕುಳಿತಿರುವ ಇವರಿಗೆ ಉಪಕಾರ ಮಾಡಹೋಗಿ ಅಪಕಾರವನ್ನು ಕೊಂಡುಕೊಂಡಂತೆ ಆಗುತ್ತದೆ" ಎಂದು ಯೋಚಿಸಿ, ಅವನು ತನ್ನ ದಾರಿ ತಾನು ಹಿಡಿದ. ಮತ್ತೆ ಕೆಲವು ಗಂಟೆಗಳ ವರೆವಿಗೂ ಯಾರೂ ಆ ಮುದುಕರಿಗೆ ಸಹಾಯ ಮಾಡಲು ಮುಂದೆ ಬರಲಿಲ್ಲ.

ಎಷ್ಟೋ ಹೊತ್ತಾದನಂತರ ಒಬ್ಬ ಬೇಡರವನು ವಿಶ್ವೇಶ್ವರನ ದರ್ಶನಮಾಡಲು ಆ ದಾರಿಯಲ್ಲಿ ಬಂದ. ವೃದ್ಧಳ ದೀನಾಲಾಪನೆ ಕೇಳಿ ವೃದ್ಧನ ಗಂಟಲಲ್ಲಿ ಗಂಗಾಜಲ ಸುರಿಯಲು ಸಿದ್ಧನಾದ. ಆದರೆ ವೃದ್ಧಳು ತನ್ನ ವಿಚಿತ್ರವಾದ ಷರತ್ತನ್ನು ಹೇಳಲು, ಆತನು ಅಚ್ಚರಿಗೊಂಡ.

ಆತನು ಆ ವೃದ್ಧರ ಮುಖಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದ. ಆತ

ನಿಗೆ ಅವರ ವದನಗಳಲ್ಲಿ ಯಾವುದೋ ದಿವ್ಯ ತೇಜಸ್ಸು ಇರುವಂತೆ ಭಾಸವಾಯಿತು.

ಬೇಡರವನು ಹೀಗೆಂದು ಯೋಚಿಸಿದ: "ಜನಿಸಿದಾಗಲಿಂದ ಮಾನವನು ಯಾವುದೋ ಒಂದು ಪಾಪಕಾರ್ಯವನ್ನು ಮಾಡುತ್ತಲೇ ಇರುತ್ತಾನೆ. ಪಾಪ ಮಾಡದವನು ಈ ಪ್ರಪಂಚದಲ್ಲೇ ಇರುವುದಿಲ್ಲ. ನಾನು ಬೇಡರ ಜಾತಿಯಲ್ಲಿ ಜನಿಸಿದೆ. ನನ್ನ ವೃತ್ತಿ ಪ್ರಾಣಿ ಹಿಂಸೆ. ಭಗವಂತನು ನನಗೆ ಕಲ್ಪಿಸಿದ ಕಸಬು ಅದು. ಈಶ್ವರನು ಕಲ್ಪಿಸಿದ ವೃತ್ತಿಗೆ ನಾನು ಹೊಣೆಗಾರನಲ್ಲ. ಆದರೆ ಈ ವೃದ್ಧರು ಸಾಮಾನ್ಯರಂತೆ ಕಾಣಿಸುವುದಿಲ್ಲ. ಸಾಮಾನ್ಯ ಮಾನವರಾದರೆ ಈ ದಿವ್ಯತೇಜಸ್ಸು ಇರುವುದಿಲ್ಲ. ಇವರು ಯಾರೋ ದಿವ್ಯ ವ್ಯಕ್ತಿಗಳು. ನಾನು ಈವರೆವಿಗೂ ತೊಂಬತೊಂಬತ್ತು ಪಾಪಗಳನ್ನು ಮಾಡಿದ್ದೇನೆ. ಈ ದಂಪತಿಗಳು ಸಾಮಾನ್ಯ ಮಾನವರೇ ಆಗಿದ್ದರೆ ನಾನು ಕೊಡುವ ತೀರ್ಥದಿಂದ ಈತನು ಮರಣಿಸುವನು. ನಾನು ಮಾಡಿದ ಪಾಪಗಳು ತೊಂಬತ್ತೊಂಬತ್ತರೊಂದಿಗೆ ಇದೂ ಸೇರಿ ನೂರಾಗುವುದು. ನಾನೆಣಿಸಿದಂತೆ ಇವರು ದಿವ್ಯವ್ಯಕ್ತಿಗಳೇ ಆಗಿದ್ದರೆ ನಾನು ಇದುವರೆವಿಗೂ ಮಾಡಿದ್ದ ಪಾಪರಾಶಿ ಪರಿಹಾರವಾಗುವುದು."

ಈ ರೀತಿ ಒಂದು ನಿರ್ಧಾರಕ್ಕೆ ಬಂದು ಅವನು ವೃದ್ಧನ ಬಾಯಿ ತೆರೆದು ಗಂಗಾ ತೀರ್ಥವನ್ನು ಹಾಕಿದ. ಆ ಕ್ಷಣವೇ ಆ ವೃದ್ಧ ದಂಪತಿಗಳು ಮಾಯವಾಗಿ ಅವರ ಸ್ಥಾನದಲ್ಲಿ ಪಾರ್ವತಿ ಪರಮೇಶ್ವರು ಸಾಕ್ಷಾತ್ಕರಿಸಿದರು.

ಆಗ ಪರಮೇಶ್ವರನು ಪಾರ್ವತಿಯೊಂದಿಗೆ "ನೋಡಿದೆಯಾ, ಈ ಬೇಡರವನ ಎದೆಗಾರಿಕೆ. ಪವಿತ್ರವಾದ ಹೃದಯವುಳ್ಳವನಾದುದರಿಂದ ತಾನು ಮಾಡಿದ ಪಾಪಗಳೆಲ್ಲವನ್ನು ನಮ್ಮ ದರ್ಶನ ಭಾಗ್ಯದಿಂದ ನೀಗಿಕೊಂಡ. ನೆಪ ಮಾತ್ರಕ್ಕೆ ಪೂಜೆಪುರಸ್ಕಾರಗಳನ್ನು ಮಾಡುವವರು ನನ್ನ ಸಾನಿಧ್ಯವನ್ನು ಪಡೆಯಲಾರರು" ಎಂದು ಹೇಳಿ ಆ ಬೇಡರವನನ್ನು ಆಶೀರ್ವದಿಸಿ ಅಂತರ್ಧಾನ ಹೊಂದಿದರು.

ಕೂಡಲೇ ಬೇಡರವನಿಗಾಗಿ ಒಂದು ಪುಷ್ಪಕ ವಿಮಾನ ಬಂದು ಆತನನ್ನು ದೇವಲೋಕಕ್ಕೆ ಕರೆದುಕೊಂಡು ಹೋಯಿತು.



# ಮುಖಚಿತ್ರ

ಧರ್ಮರಾಯನು ಕೇಳಿದ ಪುಣ್ಯಕಥೆಗಳಲ್ಲಿ ಇನ್ನೊಂದು ಸ್ವಾರಸ್ಯವಾದ ಕಥೆಯಿದು:

ಹಿಂದೆ ಅಂಗರಾಜ್ಯದಲ್ಲಿ ರೋಮಪಾದನೆಂಬ ಅರಸನಿದ್ದನು. ಅವನು ಒಮ್ಮೆ ಅಚಾತುರ್ಯದಿಂದ ಧರ್ಮವನ್ನು ಅವಮಾನಿಸಿಬಿಟ್ಟನು. ಅಂದಿನಿಂದ ಅವನ ರಾಜ್ಯದಲ್ಲಿ ಮಳೆ ನಿಂತುಹೋಯಿತು. ಅದರಿಂದ ರಾಜನಿಗೆ ಬಹಳ ಪಶ್ಚಾತ್ತಾಪವಾಯಿತು. ಮಂತ್ರಿ ಪುರೋಹಿತರನ್ನು ಸೇರಿಸಿ ಮಳೆ ಬರುವಂತೆ ಏನು ಉಪಾಯ ಮಾಡಬೇಕೆಂದು ಯೋಚನೆ ಕೇಳಿದನು. ಆಗ ಋಷಿಗಳು ಹೀಗೆ ಹೇಳಿದರು:

"ಅಡವಿಯಲ್ಲಿ ಹಚ್ಚಗೆ ಕಂಗೊಳಿಸುವ ವಿಭಾಂಡಕಾಶ್ರಮವಿದೆ. ಅಲ್ಲಿ ವಿಭಾಂಡಕನ ಕುಮಾರ ಋಷ್ಯಶೃಂಗನು ತಪಸ್ಸು ಮಾಡುತ್ತಿದ್ದಾನೆ. ಋಶ್ಯಶೃಂಗನಿರುವಲ್ಲಿ ತಿಂಗಳಿಗೆ ಮೂರು ಮಳೆ ಬರುವುದೆಂದು ದೇವೇಂದ್ರನ ವರವಿದೆ. ಅವನು ಈವರೆಗೂ ಹೆಂಗುಸರನ್ನು ಕಂಡವನಲ್ಲ. ಆದುದರಿಂದ ಅವನ ತಂದೆ ಆಶ್ರಮದಲ್ಲಿಲ್ಲದ ಸಮಯ ನೋಡಿ, ಹೆಂಗುಸರನ್ನು ಅಲ್ಲಿಗೆ ಕಳುಹಿಸಬೇಕು. ಆ ಮೂಲಕ ಅವನನ್ನು ಇಲ್ಲಿಗೆ ಕರೆದುತಂದು ಯಜ್ಞಯಾಗಗಳನ್ನು ಮಾಡಬೇಕು. ಆಗ ಕ್ಷಾಮ ನಿವಾರಣೆಯಾಗುತ್ತದೆ. ದೇವತೆಗಳೂ ಸಂತೋಷಿಸುತ್ತಾರೆ."

ಇದನ್ನು ಕೇಳಿ ಅರಸನು ಕೆಲಮಂದಿ ಸುಂದರಿಯರನ್ನು ವಿಭಾಂಡಕಾಶ್ರಮಕ್ಕೆ ಕಳಿಸಿದನು. ಅವರಲ್ಲಿ ಅತ್ಯಂತ ಸುಂದರಿಯಾದೊಬ್ಬಳು ತನ್ನ ಮಧುರವಾದ ಮಾತುಗಳಿಂದ, ಉಪಚಾರಗಳಿಂದ ಋಷ್ಯಶೃಂಗನನ್ನು ಮೆಚ್ಚಿಸಿದಳು. ಅವನು ಅವಳು ಹೇಳಿದಂತೆಯೇ ಕೇಳಿದ. ಅವಳು ಕೊಟ್ಟ ಶ್ರೇಷ್ಠವಾದ ಬಟ್ಟೆಬರೆಗಳನ್ನು ಉಟ್ಟ. ಅವಳೊಂದಿಗೆ ರಾಜಧಾನಿಗೆ ಹೊರಟ. ನದಿಯಮೇಲೆ ದೋಣಿಯಲ್ಲಿ ಪ್ರಯಾಣ ಮಾಡಿ ಅವರೆಲ್ಲ ರಾಜಧಾನಿಯನ್ನು ಸೇರಿದರು.

ರೋಮಪಾದರಾಜನು ಋಷ್ಯಶೃಂಗನಿಗೆ ಆದರೋಪಚಾರಗಳನ್ನು ಮಾಡಿದ. ಸುಗುಣಮಣಿಯಾದ ತನ್ನಮಗಳು ಶಾಂತೆಯನ್ನು ಆ ಮುನಿಗೆ ಮದುವೆ ಮಾಡಿಸಿದ.

ಋಷ್ಯಶೃಂಗ ಅಂಗರಾಜ್ಯಕ್ಕೆ ಕಾಲಿಡುವಾಗಲೇ ದೇಶಕ್ಕೆ ಮಳೆ ಸುರಿಯಲಾರಂಭಿಸಿತು. ನಂತರ ಯಜ್ಞಯಾಗಗಳು ನಡೆದು ದೇವತೆಗಳು ಸಂತೃಪ್ತರಾದರು.

ತನ್ನ ಮಗನನ್ನು ಮೋಸದಿಂದ ಕರೆದೊಯ್ದುದಕ್ಕೆ ವಿಭಾಂಡಕನಿಗೆ ಕೋಪವೇನೋ ಬಂತು. ಆದರೆ ಋಷ್ಯಶೃಂಗನಿಂದ ಹಚ್ಚಗಾಗಿ ಸುಭಿಕ್ಷವಾದ ದೇಶವನ್ನೂ, ಸಂತೋಷದಲ್ಲಿರುವ ಪ್ರಜೆಗಳಗಳನ್ನೂ ನೋಡಿ ಅವನ ಕೋಪ ಶಾಂತವಾಯಿತು. ಮಗನಿಗೂ ಸೊಸೆಗೂ ತುಂಬುಹೃದಯದಿಂದ ಆಶೀರ್ವಾದ ಮಾಡಿದ.



# ನ್ಯಾಯಸೂತ್ರ

ಕೆಲವು ಸಾವಿರ ವರ್ಷಗಳಹಿಂದೆ, ಧರ್ಮ ಪಾಲನೆಂಬ ರಾಜನು ಧವಳಗಿರಿ ಎಂಬ ರಾಜ್ಯ ವನ್ನು ಪಾಲಿಸುತ್ತಿದ್ದನು. ದಾನಧರ್ಮ ಗುಣ ಗಳಲ್ಲಿ ಸಾಟಿಯಿಲ್ಲದವನೆಂದು ಕೀರ್ತಿಪಡೆ ದನು. ನ್ಯಾಯನಿರ್ಣಯಿಸ ಬೇಕಾದಾಗ "ತನ್ನವರು, ಪರರು" ಎಂದು ಕೊಂಚ ವಾದರೂ ಭೇದಭಾವ ತೋರುತ್ತಿರಲಿಲ್ಲ.

'ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು' ಇದೇ ಆತನ ನ್ಯಾಯಸೂತ್ರ. ಹಾನಿಹೊಂದಿದವನು ಯಾರೇ ಆಗಲೀ ಆ ಪದ್ಧತಿಯ ಪ್ರಕಾರ ಹಾನಿಮಾಡಿದವನ ಮೇಲೆ ಪ್ರತಿಯಾಗಿ ಸೇಡು ತೀರಿಸಿಕೊಳ್ಳಬಹುದೆಂಬ ನ್ಯಾಯ ಆ ರಾಜ್ಯದಲ್ಲಿ ರೂಢಿಯಾಯಿತು.

ಒಂದುದಿನ ಧರ್ಮಪಾಲನು ತುಂಬಿದ ಸಭೆಯಲ್ಲಿದ್ದ. ಮಂತ್ರಿಸಾಮಂತರು ಸುಖಾ ಸೀನರಾಗಿದ್ದರು. ರಾಜ್ಯಪಾಲನೆಗೆ ಸಂಬಂಧ ಪಟ್ಟ ಮುಖ್ಯ ವಿಷಯಗಳಮೇಲೆ ಚರ್ಚೆ ನಡೆಯುತ್ತಿತ್ತು. ಆ ಸಮಯದಲ್ಲಿ ಒಂದು ನಾಗರ ಹಾವು ದಾರಿ ತಪ್ಪಿ ಆ ಸಭೆಯಲ್ಲಿ ಪ್ರವೇಶಿಸಿತು.

ನಾಗರಹಾವು ಕಾಣಿಸಿದಕೂಡಲೇ ಸಭೆ ಯಲ್ಲಿ ಕೋಲಾಹಲವೆದ್ದಿತು. ಕೆಲವರು ಕತ್ತಿ ಹಿಡಿದು ಅದನ್ನು ಕೊಲ್ಲಲುದ್ಯುಕ್ತರಾದರು. ಆದರೆ ತಂದೆಯ ಪಕ್ಕದಲ್ಲಿ ಕುಳಿತುಕೊಂಡಿದ್ದ ಯುವರಾಜನು ಅವರನ್ನು ತಡೆದು, ತನ್ನ ಖಡ್ಗದಿಂದ ನಾಗರವನ್ನು ಎರಡು ತುಂಡಾಗಿ ಕತ್ತರಿಸಿಹಾಕಿದನು.

ಹಾಗೆ ಎರಡು ತುಂಡು ಮಾಡಲು, ತಲೆ ಯಿದ್ದ ಮುಂಡದೊಂದಿಗೆ ಆ ನಾಗರವು ಅಲ್ಲಿಂದ ಹೊರಬಿದ್ದು, ತನ್ನ ಹುತ್ತವನ್ನು ಸೇರಿಕೊಂಡಿತು. ನಾಗರಹಾವಿನ ಪತ್ನಿ ಪತಿ ಗೊದಗಿದ ಈ ಅವಸ್ಥೆಯನ್ನು ಕಂಡು ಗೋಳಿ ಟ್ಟಳು. ಆಗ ಆ ನಾಗರ ತನಗೆ ಯುವರಾಜನು ಮಾಡಿದ ಅಪಕಾರವನ್ನು ತಿಳಿಯಪಡಿಸಿ:

ಎಂ. ರಾಮರಾವು




"ನಿನಗೆ ಈ ರಾಜ್ಯದ ಕಟ್ಟಳೆ ತಿಳಿದಿರ ಬಹುದು. ಆ ಪ್ರಕಾರವೇ ರಾಜನು ನ್ಯಾಯ ವಿಚಾರಣೆ ಮಾಡಿ ಮಗನಿಗೆ ಶಿಕ್ಷೆವಿಧಿಸುವನು. ಆ ನಿಯಮದ ಪ್ರಕಾರ ತಪ್ಪಿತಸ್ಥನಾದ ಯುವರಾಜನನ್ನು ನೀನು ಕಚ್ಚಿ ಸಾಯಿಸ ಬಹುದು. ಆದರೆ ಮೊದಲು ರಾಜನಿಗೆ ನ್ಯಾಯವಿಚಾರಣೆ ಮಾಡುವ ಅವಕಾಶ ಕೊಡ ಬೇಕು" ಎಂದು ಹೆಂಡತಿಗೆ ತಿಳಿಯಹೇಳಿ, ನಂತರ ಪ್ರಾಣಬಿಟ್ಟನು.

ನಾಗರಹಾವಿನ ಹೆಂಡತಿ ಅಂದು ರಾತ್ರಿ ಅರಮನೆಯನ್ನು ಪ್ರವೇಶಿಸಿ, ಯುವರಾಜನು ಮಲಗುವ ಕೋಣೆಯನ್ನು ಸೇರಿಕೊಂಡಿತು. ಗಾಢನಿದ್ರೆಯಲ್ಲಿದ್ದ ಯುವರಾಜನ ಕಂಠವನ್ನು ಬಳಸಿ ಸುತ್ತಿಕೊಂಡಿತು. ಭಯಕಂಪಿತನಾದ ಯುವರಾಜನು ಎಚ್ಚರಗೊಂಡು ಸಹಾಯ ಕ್ಕಾಗಿ ಗಟ್ಟಿಯಾಗಿ ಕಿರಿಚಿದನು.

ಈ ಕಿರಿಚಾಟ ಕೇಳಿ ದಾಸದಾಸಿಯರು ಅಲ್ಲಿಗೆ ಓಡಿಬಂದರು. ಆದರೆ ನಾಗರಹಾವಿನ ಹೆಂಡತಿಯನ್ನು ಹೇಗೆ ಕೊಲ್ಲಬೇಕೋ ಅವರಿಗೆ ತಿಳಿಯದಾಯಿತು. ಯುವರಾಜನ ಕಂಠ ವನ್ನು ಸುತ್ತಿಕೊಂಡಿರುವ ಆ ಹಾವನ್ನು ಸದೆ ಬಡೆಯಬೇಕೆಂದರೆ ಯುವರಾಜನಿಗೂ ಅಪಾಯ ಒದಗುವ ಸಂಭವವಿದೆ. ಏನು ಮಾಡಲೂ ತೋರದೆ ದಿಕ್ಕೆಟ್ಟರು.

ಆಗ ನಾಗರನ ಹೆಂಡತಿ "ಮೊದಲು ಮಹಾರಾಜರನ್ನು ಕರೆದುಕೊಂಡು ಬನ್ನಿ. ನ್ಯಾಯವಿಚಾರಣೆ ನಡೆಯಬೇಕು. ಒಂದು ವೇಳೆ ನಿಮ್ಮಲ್ಲಿ ಯಾರಾದರೂ ನನ್ನನ್ನು ಸಾಯಿಸಲು ಪ್ರಯತ್ನಿಸಿದ್ದೇ ಆದರೆ ಯುವ ರಾಜನನ್ನು ಕಚ್ಚಿಬಿಡುತ್ತೇನೆ, ಹುಷಾರ್!" ಎಂದು ಎಚ್ಚರಿಕೆ ಕೊಟ್ಟಿತು.

ಮಹಾರಾಜನು ಆ ಸ್ಥಳಕ್ಕೆ ಬಂದ. ನಾಗರಹಾವಿನ ಹೆಂಡತಿ ತನ್ನ ಗಂಡನು ಮರಣಿಸಿದ ವಿಷಯ ರಾಜನೊಂದಿಗೆ ಹೇಳಿ "ನನ್ನ ಪತಿ ಯಾರಿಗೂ ಅನ್ಯಾಯ ಮಾಡಲು ರಾಜಸಭೆಗೆ ಬರಲಿಲ್ಲ. ತನ್ನ ದಾರಿಯಲ್ಲಿ ತಾನು ಹೋಗುತ್ತಿದ್ದ. ಆದರೆ ಯುವರಾಜನು ಅನ್ಯಾಯವಾಗಿ ಆತನನ್ನು ಕೊಂದು ನನಗೆ ವೈಧವ್ಯ ಪ್ರಾಪ್ತವಾಗುವಂತೆ ಮಾಡಿದ. ಈ ರಾಜ್ಯದ ನ್ಯಾಯಸೂತ್ರದಂತೆ ನಾನು ಯುವ ರಾಜನನ್ನು ಕೊಂದು ಆತನ ಹೆಂಡತಿಗೆ

ವೈಧವ್ಯವನ್ನು ಉಂಟುಮಾಡಬಹುದಷ್ಟೇ?" ಎಂದು ದೀನತೆಯಿಂದ ಕೇಳಿದಳು.

ನಾಗರಹಾವಿನ ಹೆಂಡತಿ ಹಾಗೆ ಹೇಳಿದುದನ್ನು ಕೇಳಿ ರಾಜನು ತೀರಾ ವ್ಯಾಕುಲಗೊಂಡನು. ನ್ಯಾಯಸೂತ್ರದ ಪ್ರಕಾರ ಅನ್ಯಾಯವಾಗಿ ನಾಗರನನ್ನು ಕೊಂದು ಆಕೆಗೆ ವೈಧವ್ಯವನ್ನು ಉಂಟುಮಾಡಿದ ಯುವರಾಜನು ಶಿಕ್ಷಾರ್ಹನೇ ಸರಿ. ಈ ವಿಪತ್ತಿನಿಂದ ಪಾರಾಗುವುದು ಹೇಗೆ?

ಏನು ಮಾಡಲೂ ತೋರದೆ ರಾಜನು ಇಬ್ಬರು ನ್ಯಾಯಮೂರ್ತಿಗಳನ್ನು ಕರೆಯಿಸಿದ. ಅವರು ಎಲ್ಲ ವಿಷಯವನ್ನೂ ಕೇಳಿದರು. ಕೇಳಿದತರುವಾಯ ನ್ಯಾಯಾಧಿಪತಿಯರಲ್ಲಿ ಒಬ್ಬನು,

"ಮಹಾರಾಜರೆ, ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು ಎಂಬ ನ್ಯಾಯನಮ್ಮ ದೇಶದ ರೂಢಿಯಷ್ಟೆ. ಆದುದರಿಂದ ಯುವರಾಜನಿಂದ ಅಪಕಾರಹೊಂದಿದ ನಾಗರಹಾವು ತನ್ನ ಹೆಂಡತಿಗೆ ಪ್ರಾಪ್ತವಾದ ವೈಧವ್ಯದ ಚಿಂತೆಯನ್ನು ಯುವರಾಣಿಗೂ ಉಂಟಾಗುವಂತೆ ಮಾಡಬಹುದು" ಎಂದು ತನ್ನ ಅಭಿಪ್ರಾಯವನ್ನು ತಿಳಿಯಪಡಿಸಿದನು.

ನಾಗರಹಾವು ಈ ತೀರ್ಪಿಗೆ ತಲೆಯಾಡಿಸಿ, ತನ್ನ ಅಸಮ್ಮತಿ ಸೂಚಿಸಿತು.

"ಇದು ಯಾವ ನ್ಯಾಯಶಾಸ್ತ್ರವೂ ಅಂಗೀಕರಿಸದ ತೀರ್ಪು. ಕೇವಲ ನನ್ನನ್ನು ಮೋಸಗೊಳಿಸಲು ಈ ನ್ಯಾಯಮೂರ್ತಿಗಳು ಮಾಡಿರುವ ಪ್ರಯತ್ನ, ಮೋಸ, ಅಷ್ಟೇ"



ಎಂದು ನುಡಿದು ಸುತ್ತಲೂ ನೋಡಿತು. ಆಗ ಎರಡನೇ ನ್ಯಾಮೂರ್ತಿ ಹೀಗೆಂದ: "ನಾಗರವು ಹೇಳುವುದರಲ್ಲಿ ಸಮಂಜಸತೆ ಯಿದೆ" ಎಂದು ಹೇಳಿ,

"ಅಮ್ಮಾ ನಿನಗೆ ಸಂತಾನವೆಷ್ಟು?" ಎಂದು ನಾಗರಹಾವನ್ನು ಕುರಿತು ಬಹಳ ಮರ್ಯಾದೆಯಿಂದ ಕೇಳಿದ.

"ನನಗೆ ಐದು ಜನ ಪುತ್ರರು"

"ಹಾಗೋ, ಪಾಪ. ಯುವರಾಜರು ನಿನ್ನನ್ನು ಐದು ಪುತ್ರರಿರುವ ವಿತಂತುವನ್ನಾಗಿ ಮಾಡಿದರು. ಆದುದರಿಂದ ನೀನೂಸಹ ಅವರ ಪತ್ನಿ ಐದು ಮಕ್ಕಳಿರುವ ವಿತಂತುವನ್ನಾಗಿ ಮಾಡಬೇಕು, ಅಲ್ಲವೇ?" ಎಂದು ಕೇಳಿದಳು.

"ಅದಕ್ಕೆ ನಾಗರಹಾವು ಹೌದು, ಹೌದು ಅದೇಸರಿ" ಎಂದಿತು.

ಆಗ ನ್ಯಾಯಮೂರ್ತಿ ಹೇಳಿದ: "ಹಾಗಾದರೆ ನೀನು ಸ್ವಲ್ಪಕಾಲ ಕಾದಿರ ಬೇಕಾಗುವುದು. ಈಗ ಯುವರಾಣಿಯವರಿಗೆ ಇಬ್ಬರೇ ಪುತ್ರರು: ಆಕೆಯೂಸಹ ಐದು ಮಕ್ಕಳ ತಾಯಿಯಾದಕೂಡಲೇ ನೀನು ಸೇಡು ತೀರಿಸಿಕೊಳ್ಳಬಹುದು. ಅಷ್ಟರವರೆ ವಿಗೆ ನೀನು ಕಾಯುವುದೇ ಒಳ್ಳೆಯದೆಂದು ನನಗೆ ತೋರುತ್ತದೆ."

ಈ ತೀರ್ಪು ನ್ಯಾಯಶಾಸ್ತ್ರಕ್ಕೆ ಅನುಗುಣ ವಾಗಿಯೇ ಇರುವುದೆಂದು ನಾಗರಹಾವಿನ ಹೆಂಡತಿ ಒಪ್ಪಿಕೊಳ್ಳಲೇ ಬೇಕಾಯಿತು. ಆದುದರಿಂದ ಆಕೆ ರಾಜನನ್ನು ಒಂದು ಕೋರಿಕೆ ಕೇಳಿಕೊಂಡಳು:

"ಯುವರಾಣಿಗೆ ಐದನೇ ಮಗು ಜನಿಸಿದ ಕೂಡಲೇ ನನಗೆ ತಿಳಿಸಬೇಕು" ಎಂದಳು.

ನ್ಯಾಯಶಾಲಿಯಾದ ರಾಜನು 'ಸರಿ' ಎಂದು ಒಪ್ಪಿಕೊಂಡನು. ಆದರೆ ಯುವರಾಣಿಗೆ ಆ ತರುವಾಯ ಸಂತಾನವೇ ಆಗಲಿಲ್ಲ. ಪಾಪ, ನಾಗರಹಾವಿನ ಹೆಂಡತಿ ತನ್ನ ಸೇಡು ತೀರಿಸಿ ಕೊಳ್ಳುವ ಮೊದಲೇ ಮರಣಿಸಿತು.

ಮತ್ತೆ ಕೊಂಚ ದಿನಗಳನಂತರ ರಾಜನೂ ಮರಣಿಸಿದನು. ಯುವರಾಜನು ಸಿಂಹಾ ಸನಕ್ಕೆ ಬಂದು, ತನ್ನ ತಂದೆಯಂತೆಯೇ ನ್ಯಾಯವಾಗಿ ರಾಜ್ಯಪಾಲನೆ ಮಾಡುತ್ತಾ ತುಂಬಾ ಕೀರ್ತಿಶಾಲಿಯಾದ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟು ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಆಗಸ್ಟು 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು–26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಒ ಡ ಲ ಹು ಟ್ಟು

ಎರಡನೇ ಫೋಟೋ : ಒ ಡ ಹು ಟ್ಟು

ಕಳಿಸಿದವರು : ಕೆ. ರಾಮರಾವ್, VI ಫಾರಂ, ಎಸ್. ವಿ. ಹೆಚ್. ಹೈಸ್ಕೂಲು, ಇನ್ನಂಜೆ, ಉಡುಪಿ. ದ. ಕ.

ಬಹುಮತಿ ರೂ. 10/– ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ

# ರತ್ನಗೋಳ (ಹಿಂಬದಿಯ ಚಿತ್ರಕಥೆ-೪)

ತನ್ನ ರತ್ನಗೋಳಕ್ಕಾಗಿ ಭೂತಸರ್ಪವು ಹುಡುಕುತ್ತಿರುವ ಸಂಗತಿ ಕೇಳುತ್ತಲೇ ಕಾಪ್ತಾನನು ಬಹಳ ಹೊತ್ತು ಚಿಂತೆಮಾಡಿದ. ನಂತರ ಇದ್ದಕ್ಕಿದ್ದಹಾಗೆ "ಹಾ! ಗುಟ್ಟು ತಿಳಿಯಿತು. ಇನ್ನು ಆ ಭೂತಸರ್ಪದ ಬಳಿಯಿಂದ ಹೇಗಾದರೂ ರತ್ನ ಗೋಳವನ್ನು ದೊರಕಿಸಿಕೊಳ್ಳಬೇಕು" ಎಂದ. ಮತ್ತು ನಾವಿಕರನ್ನೆಲ್ಲಾ ಕುರಿತು "ಯಾರು ಸಮುದ್ರದೊಳಗೆ ಮುಳುಗಿ ರತ್ನಗೋಳವನ್ನು ಹುಡುಕಿ, ಎತ್ತಿಕೊಂಡು ಬರುತ್ತಾರೋ ಅವರಿಗೆ ಕೋರಿದ ಬಹುಮಾನ ಕೊಡುತ್ತೇವೆ. ಧೈರ್ಯ ಸಾಹಸ ವಿದ್ದವರು ಮುಂದೆ ಬನ್ನಿ!" ಎಂದು ಗಟ್ಟಿಯಾಗಿ ಹೇಳಿದ.

ಆದರೆ ಆ ಭೂತಸರ್ಪಕ್ಕೆ ಹೆದರಿ ಒಬ್ಬರೂ ಮುಂದೆ ಬರಲಿಲ್ಲ. ಏನಾದರೂ ರತ್ನಗೋಳವಿಲ್ಲದೆ ಇನ್ನು ರಾಣಿಯ ಮುಖ ನೋಡುವುದು ಹೇಗೆ?

ಹಡಗು ಮುಂದೆ ಹೋಗುತ್ತಿತ್ತು. ಜಪಾನಿನ ತೀರವು ಕಾಣಿಸಿತು. ಅಲ್ಲಿ ಕೆಲವು ಬೆಸ್ತರು ಸಣ್ಣಸಣ್ಣ ದೋಣಿಗಳಲ್ಲಿ ಬರುತ್ತಿರುವುದು ಕಾಣಿಸಿತು. ಕಾಪ್ತಾನು ಅವರ ಬಳಿಗೆ ಹೋಗಿ ರತ್ನಗೋಳದ ವಿಷಯ ಅವರಿಗೆಲ್ಲಾ ಹೇಳಿದ. ಅದನ್ನು ತಂದವರಿಗೆ ಬಹುಮಾನ ಕೊಡುವುದನ್ನೂ ಹೇಳಿದ. ಎಲ್ಲಾ ಕೇಳಿದರೇ ಹೊರತು ಅವರಲ್ಲಿ ಯಾರೂ ಈ ಕೆಲಸಕ್ಕೆ ತಲೆಹಾಕಲಿಲ್ಲ.

ಆದರೆ ಅವರಲ್ಲಿ ಒಬ್ಬ ಮುದುಕ ಮಾತ್ರ ಸನ್ನೆಮಾಡಿ ಕಾಪ್ತಾನನನ್ನು ತನ್ನ ದೋಣಿಯ ಬಳಿಗೆ ಬರುವಂತೆ ಕರೆದ. ನಂತರ ಕಾಪ್ತಾನನನ್ನು ಕುರಿತು— "ಅಯ್ಯಾ, ನಾನು ಪ್ರಾಣದ ಆಶೆಕೂಡಾ ಬಿಟ್ಟು ಸಮುದ್ರದಲ್ಲಿ ಮುಳುಗಿ ನಿಮ್ಮ ರತ್ನಗೋಳವನ್ನು ತರುತ್ತೇನೆ. ಆದರೆ ನನ್ನದೊಂದು ಕೋರಿಕೆಯನ್ನು ನೀವು ನೆರ ವೇರಿಸಬೇಕು" ಎಂದ. "ಹಾಗೇ ಆಗಲಿ. ನಿನ್ನ ಕೋರಿಕೆ ಹೇಳು" ಎಂದ ಕಾಪ್ತಾನ. ಆಗ ಆ ಮುದಿ ಬೆಸ್ತ "ಸ್ವಾಮಿಾ, ನನಗೆ ಒಬ್ಬನೇ ಮಗ. ಅವನು ನನ್ನ ಹಾಗೆ ಬಡವನಾಗಬಾರದು. ಹೆಸರು ಕೀರ್ತಿ ಗಳಿಸಿ ದೊಡ್ಡವನಾಗಿ ಶ್ರೀಮಂತನಾಗ ಬೇಕು. ಹಾಗೆ ಮಾಡಲು ನಿಮ್ಮಿಂದಾದೀತೆ?" ಎಂದ.

"ಅದಕ್ಕೇನು ಹಾಗೇ ಆಗಲಿ. ಇಷ್ಟೇ ಅಲ್ಲ, ಇನ್ನೂ ಏನು ಬೇಕಾದರೂ ಮಾಡುತ್ತೇನೆ. ರತ್ನಗೋಳವನ್ನು ಮಾತ್ರ ತಪ್ಪದೆ ತರಬೇಕು" ಅಂದ ಕಾಪ್ತಾನು.

"ನನ್ನ ಮಗನನ್ನು ನಿನ್ನಂಥ ಹಡಗಿನವನನ್ನಾಗಿ ಮಾಡಬೇಕು" ಎಂದು ಆ ಮುದಿಬೆಸ್ತ ಕೋರಿದ. ಹಾಗೆಯೇ ಕಾಪ್ತಾನನೂ ಮಾತು ಕೊಟ್ಟ. ಆಗ ಆ ಮುದಿ ಬೆಸ್ತನ ಮುಖ ಸಂತೋಷದಿಂದ ಇಷ್ಟಗಲವಾಯಿತು.



# ಅದೃಷ್ಟದಾಟ

ಒಂದಾನೊಂದು ಕಾಲದಲ್ಲಿ ಒಂದಾನೊಂದು ಹಳ್ಳಿಯಲ್ಲಿ ಜಯಣ್ಣನೆಂಬ ದನ ಕಾಯುವ ಹುಡುಗನಿದ್ದನು. ಅವನು ಯುವಕ, ಧೈರ್ಯಶಾಲಿ. ಅವನ ಯೋಚನೆಗಳು ಸದಾ ದೇಶಸಂಚಾರ ಮಾಡುವುದರಮೇಲೂ, ಭಾರಿಭಾರಿ ಕದನಗಳಲ್ಲಿ ಪಾಲ್ಗೊಳ್ಳುವುದರಲ್ಲೂ ಮಗ್ನವಾಗಿರುತ್ತಿದ್ದವು.

ಒಂದುದಿನ ಜಯಣ್ಣ ಇದೇರೀತಿ ಯೋಚಿಸುತ್ತಾ ದನಗಳನ್ನು ಮೇಯಲು ಬಿಟ್ಟು, ತಾನೊಂದು ಮರದ ಕೆಳಗೆ ಮಲಗಿಕೊಂಡ. ಸ್ವಲ್ಪಹೊತ್ತಿಗೆಲ್ಲಾ ಅವನಿಗೆ ನಿದ್ದೆ ಹತ್ತಿತು. ಆ ನಿದ್ರೆಯಲ್ಲಿ ಅವನಿಗೊಂದು ಹೊಸ ಬಗೆಯ ವಿಚಿತ್ರವಾದ ಕನಸಾಯಿತು.

ತಾನು ಒಂದು ಬೆಟ್ಟವನ್ನು ಹತ್ತುತ್ತಿರುವಂತೆಯೂ, ಬೆಟ್ಟದ ತುದಿಯನ್ನು ಸೇರಲು ಅಲ್ಲೊಂದು ಸಿಂಹಾಸನವಿರುವಂತೆಯೂ, ಆ ಸಿಂಹಾಸನದಮೇಲೆ ತಾನು ಕುಳಿತಂತೆಯೂ ಆತನು ಕನಸು ಕಂಡನು. ಅಷ್ಟೇ ಅಲ್ಲ, ತನ್ನಪಕ್ಕದಲ್ಲಿ ಸುಂದರಿಯೊಬ್ಬಾಕೆಯೂ ಕಾಣಿಸಿದಳು. ಹಾಗೇ ತಲೆ ತಡವಿಕೊಳ್ಳಲು ತಲೆಯಮೇಲಿದ್ದ ಕಿರೀಟ ಕೈಗೆ ತಾಕಿತು. "ನಾನು ರಾಜ, ನಾನು ರಾಜ" ಎಂದು ನಿದ್ದೆಯಿಂದ ಎಚ್ಚೆತ್ತು ಕಣ್ಣುತೆರೆದು ನೋಡಿದ ಜಯಣ್ಣ. ಅದೆಲ್ಲವೂ ಬರೀ ಮಿಥ್ಯವೆಂದು ಅವನಿಗೆ ತಿಳಿಯಿತು. ಅಲ್ಲಲ್ಲಿ ದನಗಳು ಮೇಯುತ್ತಿವೆ; ಮರದ ಕೆಳಗೆ ತಾನು ಯಥಾಪ್ರಕಾರವಿದ್ದಾನೆ! ಅಹಾ, ಎಂತಹ ಸೊಗಸಾದ ಕನಸು ಬಿತ್ತು' ಎಂದು ಯೋಚಿಸಿದ ಜಯಣ್ಣ.

ಆ ಮಾರನೆಯ ದಿನವೂಸಹ ಅದೇರೀತಿಯ ಕನಸಾಯಿತು. ಅದನ್ನು ಕಂಡು ಈ ಕನಸು ನಿಜವಾಗಲೂ ಬಹುದು ಎಂಬ ಆಶೆ ಜಯಣ್ಣನ ಮನಸ್ಸಿನಲ್ಲಿ ಅಂಕುರಿಸಿತು. 'ನಾಳೆಯೂ ಸಹ ಅದೇ ಕನಸಾದರೆ ಅಲ್ಲಿ ಕಾಣುತ್ತಿರುವ ಬೆಟ್ಟವನ್ನು ಹತ್ತುವೆನು. ಆ ಬೆಟ್ಟದಾಚೆ ಬಿಲಾಸಪುರವಿದೆ. ಅದಕ್ಕೆ ನಾನು ರಾಜನಾಗುವೆನೋ ಏನೋ' ಎಂದು ಅಂದುಕೊಂಡ ಜಯಣ್ಣ. ಮೂರನೆಯ ದಿನವೂಸಹ ಜಯಣ್ಣನಿಗೆ

ಡಿ. ತಿಮ್ಮಪ್ಪ ಪೂಜಾರಿ



ಕಾಣಿಸುವುದೇನೋ ಎಂದು ನೋಡಿದ. ಕಪ್ಪಾದ ಅಮಾವಾಸ್ಯೆಯ ಕತ್ತಲು. ಗೊಂಡಾರಣ್ಯ ಹೊರತು ಮತ್ತೇನೂ ಕಾಣಿಸಲಿಲ್ಲ. ಅಲ್ಲೇ ಒಂದು ಮರದಡಿ ಮಲಗಿಕೊಂಡು ಆ ರಾತ್ರಿಕಳೆದು ಬೆಳಗಾದಕೂಡಲೇ ಯಾವುದಾದರೊಂದು ಗ್ರಾಮವನ್ನು ಸೇರೋಣವೆಂದು ತನ್ನಲ್ಲಿ ನಿರ್ಧರಿಸಿದ.

ಜಯಣ್ಣ ಅಲ್ಲಿದ್ದ ಒಂದು ಮರದಕೆಳಗೆ ಕಾಲು ಚಾಚಿ ಮಲಗಿಕೊಂಡ. ಹಸಿವಿನ ಬಾಧೆಯಿಂದ ಸರಿಯಾಗಿ ನಿದ್ದೆ ಹತ್ತಲಿಲ್ಲ. ಅಷ್ಟರಲ್ಲಿ ಆ ಪಕ್ಕದಲ್ಲೇ ಕುದುರೆಗಳು ಕೆನೆಯುವ ಶಬ್ದವೂ, ನಾಲ್ಕಾರು ಜನ ಮಾತನಾಡುತ್ತಿರುವುದೂ ಅವನಿಗೆ ಕೇಳಿಸಿತು.

ಜಯಣ್ಣ ಕಿವಿ ನಿಗುರಿಸಿ ಅವರ ಮಾತುಗಳನ್ನು ಆಲಿಸುತ್ತಿದ್ದ. ಅಲ್ಲಿಗೆ ಸ್ವಲ್ಪದೂರದಲ್ಲಿ ಮರಗಳ ಪಕ್ಕದಲ್ಲಿ ಒಂದು ಪಾಳು ಬಿದ್ದ ಮನೆ ಯಿರುವುದೆಂದು ಅವರ ಸಂಭಾಷಣೆಯಿಂದ ಗ್ರಹಿಸಿದ. ಆ ಅಶ್ವವಾಹಕರು ಆ ರಾತ್ರಿಯನ್ನು ಆ ಹಾಳುಬಿದ್ದ ಮನೆಯಲ್ಲಿ ಕಳೆಯಲು ಆಲೋಚಿಸುತ್ತಿದ್ದರು. ಜಯಣ್ಣ ಮರದ ಕೆಳಗಿನಿಂದ ಮೆಲ್ಲನೆದ್ದು, ಸದ್ದುಮಾಡದೆ ಅವರನ್ನು ಹಿಂಬಾಲಿಸಿದ.

ಅವರೆಲ್ಲಾ ಪಾಳುಬಿದ್ದ ಮನೆಯ ಹತ್ತಿರ ಬಂದರು. ಎಲ್ಲರೂ ತಮ್ಮ ತಮ್ಮ ಕುದುರೆಗಳಿಂದ ಇಳಿದು ಮನೆಯೊಳಕ್ಕೆ ಪ್ರವೇಶಿಸಿ, ದುಪ್ಪಟಿ ಹರಡಿಕೊಂಡು ಕುಳಿತರು. ಜಯಣ್ಣ 'ಈಗೇನು ಮಾಡಲಿ' ಎಂದು ಆಲೋಚಿ

ಅದೇ ಕನಸುಬಿತ್ತು. ಇನ್ನು ಈ ಹಾಳು ದನ ಕಾಯುವ ಚಾಕರಿ ಲಾಭವಿಲ್ಲವೆಂದುಕೊಂಡು ಮರದಡಿಯಿಂದ ತಟಕ್ಕನೆದ್ದು, ಬೆಟ್ಟದಭಿಮುಖವಾಗಿ ನಡೆದ.

ಪ್ರಯಾಸ ಪಟ್ಟು ಸಾಯಂಕಾಲಕ್ಕೆಲ್ಲಾ ಬೆಟ್ಟದ ತುದಿಯನ್ನು ಸೇರಿಕೊಂಡ. ಆದರೆ ಅಲ್ಲಿ ಸಿಂಹಾಸನವಿರಲಿಲ್ಲ. ರಾಣಿಯೂ ಇರಲಿಲ್ಲ. ಆದರೂ ಜಯಣ್ಣ ನಿರುತ್ಸಾಹ ಹೊಂದಲಿಲ್ಲ. ಆಶಾವಾದಿಯಾಗಿದ್ದ. ಕತ್ತಲಾಗುವ ವೇಳೆಗೆ ಬೆಟ್ಟವಿಳಿದು ಬಿಲಾಸಪುರದ ರಾಜ್ಯವನ್ನು ಪ್ರವೇಶಿಸಿದನು.

ಆ ವೇಳೆಗೆ ಜಯಣ್ಣನಿಗೆ ಬಹಳ ಹಸಿವೆಯುಂಟಾಯಿತು. ಸುತ್ತಮುತ್ತಲು ಎಲ್ಲಿಯಾದರೂ ಹಳ್ಳಿಯಾಗಲೀ, ಜನಸಂಚಾರವಾಗಲಿ

ಸುತ್ತಾ ಆ ಮನೆಯ ಗೋಡೆಗೆ ಆತುಕೊಂಡು ನಿಂತುಕೊಂಡ. ಅವರು ಕಳ್ಳರಿರಬಹುದೆಂಬ ಸಂಶಯ ಉಂಟಾಯಿತು ಜಯಣ್ಣನಿಗೆ.

ಕೆಲ ಹೊತ್ತಿಗೆಲ್ಲಾ ಜಯಣ್ಣನ ಅನುಮಾನ ದೃಢವಾಯಿತು, ಅವರಲ್ಲೊಬ್ಬನು ದರ್ಪ ದಿಂದ ಅಧಿಕಾರ ಸ್ವರದಲ್ಲಿ,

"ಲೋ, ರಣಹದ್ದು, ಈ ದಿನ ನೀನೇನು ಸಂಪಾದಿಸಿದೆಯೋ" ಎಂದು ಕೇಳಿದ. ಅದಕ್ಕೆ ಆ ಹೆಸರಿನವನು "ಒಡೆಯಾ, ಕನಸಿನಲ್ಲೂ ನೆನೆಸದ ಒಂದು ಅಪೂರ್ವ ವಸ್ತುವನ್ನು ಸಂಪಾದಿಸಿದೆ. ಅವನು ಯಾರೋ ಭಾರೀ ಸಾಹುಕಾರ ನಿರಬೇಕು. ಅವನ ಕೋಟು ಹಾರಿಸಿದೆ. ನಮಗೆ ಧನಬೇಕೆಂದಾಗಲೆಲ್ಲಾ ಆ ಕೋಟಿನ ಕಿಸೆಯುನ್ನು ತಿರುಗಿಸಿದರೆ ಸಾಕು, ವರಹಗಳು ಉದುರುತ್ತವೆ" ಎಂದ.

"ಭಲೆ" ಎಂದ ಅವರ ನಾಯಕನು. ತರುವಾಯ "ಎಲೋ, ಗುಳ್ಳೆನರಿ, ನಿನ್ನ ಸಂಪಾದನೆ ಏನು?" ಎಂದು ಕೇಳಲು ಗುಳ್ಳೇನರಿ ಎಂಬ ಹೆಸರಿನಾತ "ಧಣಿಯೇ, ಅದೃಷ್ಟ ಕುಲಾಯಿಸಿ ಒಬ್ಬ ಸೈನ್ಯಾಧಿಕಾರಿ ಪ್ರಾಣಾಪಾಯ ಸ್ಥಿತಿಯಲ್ಲಿರುವುದು ನನ್ನ ಕಣ್ಣಿಗೆ ಬಿತ್ತು. ಆತನ ತ್ರಿಕೋಣಾ ಕೃತಿಯ ಪೇಟ ಲಪಟಾಯಿಸಿದೆ. ಅದನ್ನು ತಲೆಯಮೇಲೆ ಧರಿಸಿದರೆ ಬೇಕೆಂದಾಗ ಮೂರು ಕಡೆಯೂ ಬಾಣದಸುರಿಮಳೆ ಸುರಿಸುವುದು" ಎಂದ.

"ಭೇಷ್, ಗುಳ್ಳೇ ನರಿ ಎಂದರೆ ನೀನೇ ಕಣೋ, ಸರಿ, ಏನಯ್ಯಾ ಭಲ್ಲೂಕ, ನೀನೇನು



ಸಂಪಾದಿಸಿದೆ, ಅದರ ವಿಶೇಷ ಹೇಳು" ಎಂದು ಕೇಳಿದ ಕಳ್ಳರ ಯಜಮಾನ.

"ಸ್ವಾಮಿ, ನನಗೊಂದು ಕತ್ತಿ ಸಿಕ್ಕಿತು. ಬೇಕೆಂದಾಗ ಅದನ್ನು ನೆಲಕ್ಕೆ ಚುಚ್ಚಿದರೆ ಒಂದು ಸರ್ತಿಗೆ ಸಾವಿರ ಸೈನಿಕರು ಉದ್ಭವಿಸುವರು' ಎಂದ ಭಲ್ಲೂಕ.

"ಅಹ್ಹಹ್ಹಾ, ಬಹಳ ಸೊಗುಸಾಗಿದೆ. ಸರಿ ಸರಿ, ಅವುಗಳೆಲ್ಲವನ್ನೂ ಜೋಪಾನವಾಗಿ ಗೋಡೆಗೆ ತಗಲಿಸಿ, ನಿದ್ದೇಹೋಗಿ. ನಾಳೆ ಕೆಲಸವಿದೆ ಎಚ್ಚರಿಕೆ" ಎಂದು ಆಜ್ಞೆಮಾಡಿದ ಕಳ್ಳರ ನಾಯಕ.

ಜಯಣ್ಣ ಅವರ ಸಂಭಾಷಣೆಯನ್ನೆಲ್ಲಾ ಕೇಳಿದ. ಕಳ್ಳರು ಗಾಢನಿದ್ರೆಯಲ್ಲಿರುವುದನ್ನು ನೋಡಿ, ಗೋಡೆಗೆ ತಗಲಿಸಿದ್ದ ಕೋಟು, ಕತ್ತಿ



ಮತ್ತು ರುಮಾಲನ್ನು ತೆಗೆದುಕೊಂಡು ಅಲ್ಲಿಂದ ಬಹಳ ವೇಗವಾಗಿ ಕಂಬಿಕಿತ್ತ.

ಎರಡು ಮೂರು ದಿನಗಳು ಒಂದೇಸವನೆ ನಡೆದು ಬಿಲಾಸಪುರವನ್ನು ಸೇರಿ, ರಾಜನನ್ನು ನೋಡಲು ಅನುಮತಿ ಬೇಡಿದ. "ನೀನು ಯಾರು? ಮಹಾರಾಜರ ದರ್ಶನವಾಗುವುದು ಸುಲಭವೆಂದು ನೆನೆಸಿದೆಯಾ?" ಎಂದು ಕೇಳಿದರು ಕಾವಲುಗಾರರು.

"ಓ, ಹಾಗೋ, ಹಾಗಾದರೆ ನೀವು ನನ್ನ ಹೆಸರೇ ಕೇಳಿಲ್ಲವೆಂದಾಯಿತು. ನನ್ನ ಹೆಸರು ಮಹಾವೀರ ಜಯಸಿಂಹ. ನಾನು ಯಾರೋ ಈಗ ತಿಳಿಯಿತೇ?" ಎಂದು ಕಣ್ಣು ಕೆಂಪಗೆ ಮಾಡಿನೋಡಿದ ಜಯಣ್ಣ. "ನೀವು... ನೀವು...ಮಹಾವೀರ ಜಯಸಿಂಹರೇ. ಬನ್ನಿ ದಯಮಾಡಿಸಿ" ಎಂದು ಕಾವಲುಗಾರರು ಅತಿ ಭಯವಿನಯಗಳಿಂದ ಅವನನ್ನು ರಾಜನ ಹತ್ತಿರಕ್ಕೆ ಕರೆದುಕೊಂಡು ಹೋದರು. ಆ ಸಮಯದಲ್ಲಿ ರಾಜಕುಮಾರಿಯೂ ಸಹ ಅಲ್ಲೇ ಇದ್ದಳು.

ರಾಜಕುಮಾರಿಯನ್ನು ಕಂಡಕೂಡಲೇ ಜಯಣ್ಣನಿಗೆ ತನ್ನ ಕನಸು ನನಸಾಗುವಂತೆ ತೋರಿತು. ಕಿರೀಟವೊಂದಿದ್ದರೆ ಆಕೆ ತಾನು ಕನಸಿನಲ್ಲಿ ಕಂಡ ರಾಣಿಯಂತೆಯೇ ಇದ್ದಾಳೆ!

ರಾಜನು ಜಯಣ್ಣನನ್ನು ನೋಡಿ "ನಿನಗೇನುಬೇಕು?" ಎಂದು ಕೇಳಿದ.

ಜಯಣ್ಣನು ತನ್ನ ಹತ್ತಿರವಿದ್ದ ರುಮಾಲು ಮತ್ತು ಕತ್ತಿಯ ವಿಷಯವನ್ನು ಮಾತ್ರ ವಿವರವಾಗಿ ತಿಳಿಸಿದ. ಅನೇಕ ಯುದ್ಧಗಳಲ್ಲಿ ಪಳಗಿದ ವೀರ ನಾನು ಎಂದು ಹೇಳಿದ.

"ಬೇಕಾದರೆ ಈ ಪ್ರಪಂಚವನ್ನೇ ಜಯಿಸಿ ನಿಮಗೆ ಪಟ್ಟಾಭಿಷೇಕ ಮಾಡಬಲ್ಲೆ" ಎಂದ ಜಯಸಿಂಹ.

ರಾಜನು ಪರಮಾನಂದ ಭರಿತನಾದ. "ನೀನು ಪ್ರಪಂಚವನ್ನು ಆಮೇಲೆ ಜಯಿಸುವಿಯಂತೆ. ಸದ್ಯಕ್ಕೆ ನನ್ನ ರಾಜ್ಯದಮೇಲೆ ಭಾರಿ ಸೈನ್ಯದೊಂದಿಗೆ ದಂಡೆತ್ತಿ ಬಂದಿರುವ ಗಾಂಧಾರ ರಾಜನನ್ನು ಸೋಲಿಸು" ಎಂದ.

"ಅದೆಷ್ಟರ ಕೆಲಸ. ಆದರೆ ನನ್ನದೊಂದು ಬೇಡಿಕೆ ಇದೆ. ನಾನು ಗಾಂಧಾರ ರಾಜನನ್ನು ಜಯಿಸಿದ ತರುವಾಯ ನಿಮ್ಮ ಮಗಳನ್ನು ನನಗೆಕೊಟ್ಟು ವಿವಾಹಮಾಡುವಿರಾ?"

ಎಂದು ಕೇಳಿದ ಜಯಣ್ಣ ಸ್ವಲ್ಪವಾದರೂ ಹೆದರದೆ ಬೆದರದೆ ಒಳ್ಳೇ ದಿಟ್ಟತನದಿಂದ.

ರಾಜನು ಸರಿ ಎಂದು ಒಪ್ಪಿಕೊಂಡ. ಆತನಿಗೆ ಗಾಂಧಾರ ರಾಜನಿಂದ ಭಾರಿ ಮುಪ್ಪು ಒದಗುವಂತೆ ತೋರಿತು. ಅಷ್ಟು ಬಲಾಢ್ಯನನ್ನು ಜಯಿಸಿದವನಿಗೆ ಮಗಳನ್ನು ಕೊಟ್ಟು ವಿವಾಹ ಮಾಡಿದರೆ ತನ್ನ ಘನತೆ ಹೆಚ್ಚಾಗುವುದೆಂದು ನೆನೆಸಿದ ರಾಜ.

ಜಯಸಿಂಹನು ಸ್ವಲ್ಪ ಸೈನ್ಯವನ್ನು ತೆಗೆದುಕೊಂಡುಹೋಗಿ ಗಾಂಧಾರ ರಾಜನಮೇಲೆ ಬಿದ್ದನು. ತನಗೆ ಸೈನಿಕರು ಅಗತ್ಯವಾದಾಗ ಕತ್ತಿಯನ್ನು ನೆಲಕ್ಕೆ ಚುಚ್ಚಿ, ಸಾವಿರಮಂದಿ ಉದ್ಭವಿಸುವಂತೆ ಮಾಡುತ್ತಿದ್ದ. ಅಷ್ಟೇ ಅಲ್ಲ. ಆತನ ತಲೆ ರುಮಾಲಿನಿಂದ ಹೊರಟ ಬಾಣಗಳು ಶತ್ರು ಸೈನ್ಯವನ್ನು ಗೊಂದಲದಲ್ಲಿ ಸಿಲುಕಿಸಿ ನುಚ್ಚುನೂರು ಮಾಡುತ್ತಿದ್ದುವು.

ಬಹಳ ಭೀಕರ ಕದನವಾಯಿತು. ಸಾಯಂಕಾಲವಾಗುವ ವೇಳೆಗೆ ಎಲ್ಲೋ ಕೆಲವು ಸೈನಿಕರು ಉಳಿಯಲು ಗಾಂಧಾರ ರಾಜನು ಪಲಾಯನ ಮಾಡಿದನು.

ಜಯಗಳಿಸಿದ ಜಯಸಿಂಹನು ಸೈನಿಕರು ಜಯಧ್ವನಿಗಳನ್ನು ಮಾಡುತ್ತಿರಲು, ವಿಜಯವೀರನಂತೆ ಗಂಭೀರವಾಗಿ ಬಿಲಾಸಪುರದ ರಾಜನ ಹತ್ತಿರಕ್ಕೆ ಹೋದ.

ರಾಜನು ಜಯಣ್ಣನನ್ನು ಅಭಿನಂದಿಸಿ "ಜಯಸಿಂಹ, ನಿನಗಿಂತಲೂ ವೀರನಾದ ಅಳಿಯನು ನನಗೆ ಸಿಗಲಾರ. ನಾನೂ ವೃದ್ಧನಾದೆ. ಈಗಲೇ ನಿನ್ನನ್ನು ಬಿಲಾಸಪುರದ ರಾಜ್ಯಕ್ಕೆ ಒಡೆಯನನ್ನಾಗಿ ಮಾಡುವೆನು" ಎಂದ ಮಂದಹಾಸದಿಂದ.

ಜಯಸಿಂಹನಿಗೂ ರಾಜಕುಮಾರಿಗೂ ಅತಿ ವೈಭವದಿಂದ ವಿವಾಹ ನಡೆಯಿತು. ತರುವಾಯ ಪಟ್ಟಾಭಿಷೇಕವೂ ಆಯಿತು. ಸಿಂಹಾಸನದಮೇಲೆ ಆತನೊಂದಿಗೆ ಆತನ ಪಕ್ಕದಲ್ಲಿ ರಾಜಕುಮಾರಿಯು ಕಿರೀಟ ಧರಿಸಿ ರಾಣಿಯಂತೆ ಕುಳಿತುಕೊಂಡಳು.

'ನಾನು ಕನಸಿನಲ್ಲಿ ಕಂಡ ರಾಣಿಯೇ ಈಕೆ' ಎಂದುಕೊಂಡು ಆನಂದ ತುಂದಿಲನಾದ ಜಯಣ್ಣ. ಆದರೆ ತನಗೆ ಕಟ್ಟಿದ ಕನಸನ್ನು ಮಾತ್ರ ಅವನು ಯಾರಿಗೂ ಹೇಳಲಿಲ್ಲ.





# ಬೊಜ್ಜು ಭಾರ

—" ಸುಂದರಿ "

---

ಊರೊಳಗವರೇ
ಭಾರಿಯ ಧನಿಕರು
ಶ್ರೀ ರಾವ್ ಬಹದೂರ್ ಧೋಂಡಯ್ಯ

ಮೀರಿದ ಸಂಪದ
ಸೇರಿದ ಪಾತ್ರದ
ತೋರದ ಗಾತ್ರದ ಭೋಂಡಯ್ಯ!

ಕುಂತಲ್ಲಿರುತಲಿ
ಸಂತತ ಮೆಲುತಲಿ
ಸಂತಸವಿಲ್ಲದೆ ಜಡತನದಿಂ

ಕುಂತರೆ ಕಷ್ಟವು,
ನಿಂತರನಿಷ್ಟವು
ಅಂತಿಂತೂ ದಿನ ದೂಡ್ತಿದ್ದರ್.

ಗ್ರಾಸವ ನುಂಗಲು
ಶ್ವಾಸುಬ್ಬಸ, ಉಪ
ವಾಸ ಮಾಡಲತ್ಯಾಯಾಸ.

ತಾ ಸದಾವು ಮಿದು
ವಾಸಿನೊಳೊರಗುತ
ಹಾಸಿಗೆ ಹೊಟ್ಟೆಯು ಹೇರ್ ಹೊರುತ

ಬೊಜ್ಜುರೋಗ ತನ
ಗುಜ್ಜಗಿಸಿತೆನುತ
ಸರ್ಜನ್ ಡಾಕ್ಟರ ಕರೆಯಿಸಿದರ್.

ಬೊಜ್ಜಿನ ಉದರವ
ನುಜ್ಜುತೆ ವೈದ್ಯಕಿ
ಕಜ್ಜವನೆನಿತೋ ನಡೆಯಿಸಿದರ್.

ಕಾಲ ತಿರುಗೆ ಬಲು
ಚಾಲಾಕಿ ಡಾಕ್ಟರು
ಮೇಲುವೈದ್ಯ ಮಾಡುವೆನೆಂದರ್.

ಬಾಳದ ಸಾಯದ
ಭಾಳ ರೋಗಿಗಳ
ಬಾಳಗೊಳಿಸಿರುವೆ ತಾನೆಂದರ್.

'ಹಾಗಾದರೆನ್ನ
ಈ ಘನಬೊಜ್ಜನು
ಹೋಗಲಾಡಿಸೆ'ನೆ ಧೋಂಡಯ್ಯ,

'ಹಾಗೇ ಆಗಲಿ,
ಈಗೀ ಔಷಧ
ಹೋಗಲಿ ಹೊಟ್ಟೆಗೆ ಕುಡಿರೆ'ಂದರ್,

ಹೊತ್ತಿಳಿವಾಗಲೆ
ಮತ್ತಾ ಡಾಕ್ಟರು
'ಚಿತ್ತೈಸಿರಿ ವಿಹರಿಸಲೆ'ಂದು
ಮೆತ್ತೆಯಾಸನದ
ಉತ್ತಮ ಸಾರೋಟೆ
ಗೆತ್ತಿರಿಸಿಯವರ ಸಾಗಿಸಿದರ್.



ಏರಿ ಡಾಕ್ಟರೇ
ಸಾರಥಿಯಾಗುತೆ
ಹಾರೋಡಿಸಿದರು ಕುದುರೆಗಳ

ಕೇರಿಯ ಕಳೆಯುತೆ
ಊರನು ದಾಟುತೆ
ಜೋರೋಡುತಿತ್ತು ಸಾರೋಟು.

ಜಾಲದ ಡಾಕ್ಟರು
ಕೋಲನು ಮೆಲ್ಲನೆ
ಬೀಳಿಸಿ ಕೆಳಗೆಂದರು 'ಅರರೆ!

ಕೋಲು ಬಿತ್ತು, ನಾ
ಕೀಳಿಳಿದರೆ ಮೇಣ್
ತಾಳದೋಡುವುವು ಕುದುರೆಗಳು.

ಓಘೋಂಡಯ್ಯಾ,
ನೀವ್ದಯ ಮಾಡೀ,
ಬೀದಿಗಿಳಿದು ತುಸು ಕೋಲ್‌ತನ್ನಿ,

ಆದುದ ಮನ್ನಿಸಿ
ಆದರಿಸಿರೆ'ನಲ್
ಆ ಘೋಂಡಯರಂತೇ ಇಳಿದರ್.

ಇಳಿದೆರಡಡಿಗೇ
'ಛೆಲೊಛೆಲೊ' ಎಂದು
ನಿಲದೋಡಿಸಿದರ್ ಸಾರೋಟು.

'ಬಲುಕೈಕೊಟ್ಟಾ
ಖಳ ಡಾಕ್ಟ್ರಕಟಾ!
ಬಲುದೂರದಿ ಬಿಟ್ಟೋಡಿದನೇ!'





ಎಂದೀ ಪರಿ ಮನ
ದಂದುಗಗೊಳ್ಳುತೆ,
ಹಿಂದಕೆ ನಡೆಯುತೆ ಘೋಂಡಯ್ಯ.

ಒಂದೊಂದಡಿಯನೆ
ಮುಂದೆ ಮೆಲ್ಲಿಡುತ
ಒಂಪೊಂದಗುಲ ಬೊಜ್ಜಳಿಯಲ್.

ನಿಟ್ಟುಸಿರೇನು!
ಹೊಟ್ಟೆಯ ಒಳಗೆ
ಹುಟ್ಟಿದ ಹಸಿವೆಯ ಪರಿಯೇನು!

ಬೆಟ್ಟದುದರ ಸಮ
ತಟ್ಟಾಗಲವರು
ಕಟ್ಟಚ್ಚರಿಯಿಂ ಮನೆಸೇರ್ದರ್.

ಒಳ್ಳೆಯ ಹಸಿವಿನ
ಒಳ್ಳಿತನರಿಯುತೆ
ಒಳ್ಳೆಯರುಚಿ ಯರಿತುಂಡರವರ್.

ಸಲ್ಲಲಿತನಿದ್ರೆ
ನಲ್ಲೆಯನಾನಿಸಿ
ಉಲ್ಲಾಸದಿಮೇಣೆದ್ದರವರ್.

ಸತ್ಯದ ಡಾಕ್ಟರ
ಉತ್ತಮ ಡಾಕ್ಟರ
ಹತ್ತಿರಿರಿಸಿ ಬಲು ಗೌರವಿಸಿ
ಸ್ತುತ್ಯದ ಅವರ ಚಿ
ಕಿತ್ಸೆಗೆ ಮೆಚ್ಚುಗೆ
ಇತ್ತು ಸತ್ಕರಿಸಿ ಸುಖಿಸಿದರು.




ಹಿಂದೆ ನೇಪಾಳದೇಶಕ್ಕೆ ಸಮೀಪದಲ್ಲಿ ಶಾಕ್ಯರಾಜ್ಯವಿತ್ತು. ಶಾಕ್ಯರಾಜ್ಯಕ್ಕೆ ಮುಖ್ಯಪಟ್ಟಣ ಕಪಿಲವಸ್ತು. ಈ ಶಾಕ್ಯರು ಆಗಿನ ಕೋಸಲದೇಶದ ರಾಜನಾದ ಪ್ರಸೇನಜಿತ್ತನ ಸಾಮಂತರಾಗಿದ್ದರು. ಆ ರೀತಿ ಅಧೀನರಾಗಿದ್ದರೂಸಹ ಕುಲಗೌರವವನ್ನು ಪಾಲಿಸುವ ಸ್ವಭಾವದವರಾದುದರಿಂದ ಇತರ ಜಾತಿ ಮತಗಳೊಂದಿಗೆ ವಿವಾಹ ಸಂಬಂಧಗಳನ್ನು ಬೆಳೆಸುತ್ತಿರಲಿಲ್ಲ.

ಕೋಸಲದರಸನಿಗೆ ಬುದ್ಧ ಭಗವಾನನೆಂದರೆ ಅಮಿತ ಭಕ್ತಿ. ಬುದ್ಧನು ಶಾಕ್ಯವಂಶಸ್ಥನಾದುದರಿಂದ ಭಗವಾನನೊಂದಿಗೆ ಇನ್ನಷ್ಟು ಸಂಪರ್ಕವಿಟ್ಟುಕೊಳ್ಳಬೇಕೆಂಬ ಸಂಕಲ್ಪದಿಂದ ಶಾಕ್ಯವಂಶ ಸ್ತ್ರೀಯನ್ನು ತನ್ನ ಪಟ್ಟದರಸಿಯನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದನು. ಇದನ್ನು ಶಾಕ್ಯರಿಗೆ ತಿಳಿಸಿ, ಕನ್ಯಾದಾನ ಮಾಡಬೇಕೆಂದು ಕೋರಿಕೊಂಡ.

ಶಾಕ್ಯರಿಗೆ ಸಂದಿಗ್ಧಸ್ಥಿತಿ ಬಂದೊದಗಿತು. ಕೋಸಲರಾಜನ ಇಷ್ಟದಂತೆ ನಡೆದುಕೊಳ್ಳದಿದ್ದರೆ ತಮಗೆ ನಾಶತಪ್ಪದು. ಹಾಗೆ ನಡೆಯಲು ಅವರ ಸಂಪ್ರದಾಯಕ್ಕೆ ವಿರುದ್ಧ. ಸಭೆ ನಡೆಯಿಸಿದರು. ಚರ್ಚೆ, ವಾದವಿವಾದಗಳು ನಡೆದವು.

ಆಗ ಮಹಾನಾಮ ಎಂಬಾತನು "ನೀವೇನೂ ಕಳವಳಪಡಬೇಡಿ. ನನ್ನ ಕುಮಾರಿ ವಾಸವ ಕ್ಷತ್ರಿಯ ಒಬ್ಬ ದಾಸಿಯಲ್ಲಿ ಜನಿಸಿದಳು. ಸುಂದರಿ. ಆಕೆ ಶಾಕ್ಯವಂಶದ ಹೆಣ್ಣು ಮಗಳೆಂದು ಹೇಳಿ, ಕೋಸಲರಾಜನ ಹತ್ತಿರಕ್ಕೆ ಕಳುಹಿಸುವಾ" ಎಂದ. ಇದಕ್ಕೆ ಎಲ್ಲರೂ ಒಪ್ಪಿಕೊಂಡರು. ಆಪತ್ತು ತೊಲಗಿತೆಂದು ಎಲ್ಲರೂ ಸಂತಸಗೊಂಡರು.

ಮಹಾನಾಮನು ಕೋಸಲರಾಜನ ದೂತರನ್ನು ಕೂಗಿ "ನಾವು ಕನ್ಯಾದಾನ ಮಾಡುತ್ತೇವೆ. ನೀವು ಈಕೆಯನ್ನು ನಿಮ್ಮ ದೇಶಕ್ಕೆ ಕರೆದುಕೊಂಡು ಹೋಗಬಹುದು" ಎಂದು ಹೇಳಿದ. ಆದರೆ ವಂಶಮರ್ಯಾದೆಗಳಲ್ಲಿ ಶಾಕ್ಯರು ತುಂಬಾ ಕಟ್ಟುನಿಟ್ಟಾದವರೆಂದು ದೂತರಿಗೆ ತಿಳಿದಿತ್ತು. ಈಗ ಅವರು ಇಷ್ಟೊಂದು ಸುಲಭವಾಗಿ ಒಪ್ಪಿಕೊಂಡಿರು

ಎಚ್. ಎಂ. ಚಂದ್ರಶೇಖರ

ವುದನ್ನು ಕಂಡು ಅವರಿಗೆ ಸಂದೇಹವಾಯಿತು. "ನಮ್ಮನ್ನು ಮೋಸಮಾಡಲು ಏನೋ ಸಂಚು ಹೂಡಿದ್ದಾರೆ" ಎಂದು, ಆ ದೂತರು ಅನುಮಾನಗೊಂಡರು.

"ಸರಿ, ನಿಮ್ಮೊಂದಿಗೆ ಒಂದೇತಾಟಿನಲ್ಲಿ ಊಟಮಾಡುವ ಕನ್ಯೆಯಾದರೆ ನಾವು ಕರೆದು ಕೊಂಡು ಹೋಗುತ್ತೇವೆ. ಇಲ್ಲದಿದ್ದರೆ ಇಲ್ಲ." ಎಂದು ಆ ದೂತರು ಒಂದು ಪರೀಕ್ಷೆಯಿಟ್ಟರು.

ಶಾಕ್ಯರು ಮತ್ತೆ ಬಿಕ್ಕಟ್ಟಿನಲ್ಲಿ ಸಿಲುಕಿ ಕೊಂಡರು. ಮತ್ತೆ ಎಲ್ಲರೂ ಸಭೆಸೇರಿ ಆಲೋಚಿಸಿದರು. ಕೋಸಲದೇಶದ ದೂತರನ್ನು ಮೋಸಮಾಡಿ ಕಳುಹಿಸಬೇಕೆಂದು ನಿರ್ಧರಿಸಿ ಒಂದು ಉಪಾಯವನ್ನು ಯೋಚಿಸಿದರು.

ಅಂದು ಮಹಾನಾಮನು ಊಟಕ್ಕೆ ಕುಳಿತುಕೊಂಡ. ತುಸ ಎಡಮಗ್ಗುಲಿಗೆ ದೂತರೂ ಕುಳಿತುಕೊಂಡರು. ಮಹಾನಾಮನು ದಾಸಿಯುವಳನ್ನು ಕೂಗಿ "ಮಗುವನ್ನು ಕರೆದುಕೊಂಡು ಬಾ, ನನ್ನೊಂದಿಗೆ ಊಟ ಮಾಡುವಳು" ಎಂದ. ನಿಮಿಷ ಮಾತ್ರದಲ್ಲಿ ವಾಸವ ಬಂದು, ತಂದೆಯ ಸಂಗಡ ಆತನ ಮುಂದೆ ಕುಳಿತುಕೊಂಡಳು. ಮಹಾನಾಮನು ಒಂದು ತುತ್ತು ಬಾಯಲ್ಲಿಟ್ಟುಕೊಂಡ. ವಾಸವಕ್ಷತ್ರಿಯ ಸಹ ತಟ್ಟೆಯಲ್ಲಿ ಕೈ ಹಾಕಿದಳು. ಮಹಾನಾಮನು ಎರಡನೇ ತುತ್ತು ಎತ್ತಿಕೊಳ್ಳುವುದರಲ್ಲಿದ್ದ.

ಆಗ ಒಬ್ಬ ಭಟನು ಅಲ್ಲಿಗೆ ಬಂದು ಕಾಗದವನ್ನು ಕೊಡುತ್ತಾ "ಮಹಾಪ್ರಭೂ, ಆವಂತಿ




ಮಹಾರಾಜರು ಅತ್ಯವಸರವಾಗಿ ಈ ಕಾಗದ ಕೊಟ್ಟು ಕಳುಹಿಸಿದ್ದಾರೆ. ಕೂಡಲೇ ಸಮಾಧಾನವನ್ನು ತರುವಂತೆ ತಿಳಿಸಿದ್ದಾರೆ" ಎಂದ.

ಮಹಾನಾಮನ ಬಲಗೈ ತಟ್ಟೆಯಲ್ಲೇ ಇತ್ತು. ಎಡಗೈಯಿಂದ ಕಾಗದವನ್ನು ತೆರೆದು ನೋಡುತ್ತಾ "ನೀನು ಊಟಮಾಡುತ್ತಿರು ತಾಯಿ" ಎಂದ. ವಾಸವ ಊಟಮಾಡುತ್ತಿದ್ದಳು. ಆತನು ಅತಿ ಶ್ರದ್ಧೆಯಿಂದ ಕಾಗದ ಓದುತ್ತಲೇ ಇದ್ದ. ಮಗಳ ಊಟವಾದ ಕೂಡಲೇ ತಂದೆ ಮಗಳು ಇಬ್ಬರೂ ಎದ್ದು ಹೋಗಿ ಕೈ ತೊಳೆದುಕೊಂಡರು. ಕೋಸಲ ರಾಜನ ದೂತರು ಇದರ ರಹಸ್ಯವನ್ನು ತಿಳಿಯದೇ ಹೋದರು. ವಾಸವ ಆ ಮಹಾನಾಮನ ಸ್ವಂತ ಪುತ್ರಿ ಯೆಂದು ನಂಬಿದರು.




ಮಹಾನಾಮನು ಬಹು ವೈಭವದಿಂದ ಮಗ ಳನ್ನು ಕೋಸಲರಾಜ್ಯಕ್ಕೆ ಕಳುಹಿಸಿಕೊಟ್ಟನು.

ಕೋಸಲದರಸನು ಸಂತೋಷಗೊಂಡು ವಾಸವಳನ್ನು ಪಟ್ಟದರಸಿಯನ್ನಾಗಿ ಮಾಡಿ ಕೊಂಡನು. ಕೆಲವು ತಿಂಗಳುಗಳಾದ ಮೇಲೆ ವಾಸವಕ್ಷತ್ರಿಯಳಿಗೆ ಸುಂದರ ಪುತ್ರನು ಜನಿ ಸಿದನು. ಅವನಿಗೆ ವಿರೂಢವನೆಂದು ನಾಮ ಕರಣ ಮಾಡಿದರು.

ವಿರೂಢವನು ದೊಡ್ಡವನಾದ. ಒಂದು ದಿನ ತಾಯಿಯ ಹತ್ತಿರಕ್ಕೆ ಹೋಗಿ "ಅಮ್ಮಾ, ನನ್ನ ಸಹಪಾಠಿಗಳೆಲ್ಲರೂ ಅವರವರ ತಾತಂದಿರ ಮನೆಗಳಿಗೆ ಹೋಗುತ್ತಿದ್ದಾರೆ. ನಾನೂ ನನ್ನ ತಾತನ ಮನೆಗೆ ಹೋಗಿಬರು ವೆನು" ಎಂದ. ಆ ಮಾತು ಕೇಳಿ ವಾಸವ ಕ್ಷತ್ರಿಯಳ ಹೃದಯ ಧಸಕ್ಕೆಂದಿತು. ಬೇಡ ವೆಂದಷ್ಟೂ ವಿರೂಢವನ ಹಠ ಹೆಚ್ಚಾಯಿತು.

ಗತ್ಯಂತರವಿಲ್ಲದೆ ಮಗನ ಪ್ರಯಾಣಕ್ಕೆ ಅನುಮತಿಯಿತ್ತು, ರಹಸ್ಯವಾಗಿ ತನ್ನ ತಂದೆಗೆ ಒಂದು ಕಾಗದ ಬರೆದಳು. "ನಿಮ್ಮ ಮೊಮ್ಮಗನು ಕಪಿಲವಸ್ತುವಿಗೆ ಬರು ತ್ತಿದ್ದಾನೆ. ಅವನಿಗೆ ರಹಸ್ಯ ತಿಳಿಯದಂತೆ ಗುಟ್ಟಾಗಿಡಬೇಕು" ಎಂದು ಸೂಚಿಸಿದ್ದಳು.

ವಿರೂಢವನು ಬರುತ್ತಿರುವನೆಂದು ತಿಳಿದ ಕೂಡಲೇ ನಗರದ ಪ್ರಜೆಗಳು ತಮ್ಮ ಮಕ್ಕಳ ನ್ನೆಲ್ಲಾ ಅಕ್ಕಪಕ್ಕದ ಹಳ್ಳಿಗಳಿಗೆ ಕಳುಹಿಸಿ ಬಿಟ್ಟರು. ಏಕೆಂದರೆ ದಾಸೀ ಪುತ್ರನಿಗೆ ಶಾಕ್ಯ ರಾರೂ ನಮಸ್ಕಾರ ಮಾಡಬಾರದೆಂದು ಅವರ ನಿಯಮ.

ವಿರೂಢವನು ಕಪಿಲವಸ್ತು ನಗರವನ್ನು ಸೇರಿಕೊಂಡ. ಅವನಿಗೆ ಸ್ವಾಗತ ಬಯಸಲು ಊರಿನವರೆಲ್ಲಾ ಸಭೆ ಸೇರಿದರು. ಅಲ್ಲಿ ನೆರೆ ದಿದ್ದವರನ್ನೆಲ್ಲಾ ರಾಜಕುಮಾರನಿಗೆ ಪರಿಚಯ ಮಾಡಿಸಿಕೊಟ್ಟರು. ವಿರೂಢವನು ಪ್ರತಿ ಯೊಬ್ಬರಿಗೂ ಕೈಮುಗಿದನು. ಆದರೆ ಯಾ ರೊಬ್ಬರೂ ಆತನಿಗೆ ಪ್ರತಿಯಾಗಿ ನಮಸ್ಕಾರ ಮಾಡಲಿಲ್ಲ! ವಿರೂಢವನು ಆಶ್ಚರ್ಯಗೊಂಡ. ಆತನಿಗೆ ಶಾಕ್ಯರು ಬಿಡದಿ, ಭೋಜನಗಳನ್ನು ತುಂಬಾ ಎಚ್ಚರಿಕೆಯಿಂದ ಏರ್ಪಡಿಸಿದರು.

ಕೆಲವು ದಿನಗಳಿದ್ದು ವಿರೂಢವನು ತನ್ನ ನಗರಕ್ಕೆ ಪ್ರಯಾಣ ಬೆಳೆಸಿದನು. ಆತನ ಸೈನಿಕರಲ್ಲಿ ಒಬ್ಬನು ಬಿಡದಿಯಲ್ಲಿ ಯಾವುದೋ

ವಸ್ತುವನ್ನು ಮರೆತುಹೋಗಿದ್ದನು. ಆದುದರಿಂದ ಆತನು ಮತ್ತೆ ಹಿಂದಕ್ಕೆ ಬಂದ. ಅಲ್ಲಿ ಒಂದು ಅದ್ಭುತದೃಶ್ಯ ಅವನಿಗೆ ಕಾಣಿಸಿತು. ವಿರೂಢವನು ಕುಳಿತಿದ್ದ ಸ್ಥಳವನ್ನು ಒಬ್ಬದಾಸಿ ಹಾಲಿನಿಂದ ತೊಳೆದು ಶುದ್ಧಿಮಾಡುತ್ತಿದ್ದಳು.

ಸೈನಿಕನು ಆಕೆಯಿಂದ ಎಲ್ಲ ವಿಷಯವನ್ನೂ ತಿಳಿದುಕೊಂಡ. ಈ ವಿಷಯವನ್ನು ತನ್ನ ಸಂಗಡಿಗರಿಗೆ ಹೇಳಿದ. ಅಲ್ಲಕಲ್ಲೋಲವೆದ್ದಿತು. ಈ ವಿಷಯ ಹೇಗೋ ವಿರೂಢವನ ಕಿವಿಗೂ ತಲುಪಿತು. ಆತನಿಗೆ ವಿಪರೀತವಾದ ಕೋಪ ಬಂತು. "ನಾನು ಕುಳಿತಿದ್ದ ಆಸನ ಹಾಲಿನಿಂದ ತೊಳೆದು ಶುದ್ಧಿಮಾಡಿದರು ಶಾಕ್ಯರು. ಇದು ಸಾಕಾಗದು. ನಾನು ರಾಜನಾಗಿ ಆ ಸ್ಥಳವನ್ನು ಶಾಕ್ಯರ ಕೊರಳ ರಕ್ತದಿಂದ ಶುದ್ಧಿಮಾಡುತ್ತೇನೆ. ಅದುವರೆವಿಗೆ ಅದು ಪವಿತ್ರವಾಗದು" ಎಂದು ಪ್ರತಿಜ್ಞೆ ಹೂಡಿದನು.

ವಿರೂಢವನು ಕೋಸಲ ರಾಜ್ಯವನ್ನು ಸೇರಿಕೊಂಡ ಕೂಡಲೇ ಈ ಕಪಟನಾಟಕವೆಲ್ಲಾ ಪ್ರಸೇನಜಿತ್ತನಿಗೆ ತಿಳಿಯಿತು. ಆತನೂ ಕೋಪದಿಂದ ಕಿಡಿಕಿಡಿಯಾದ. ಆದರೆ ತನಗೆ ಗುರುದೇವನಾದ ಬುದ್ಧಭಗವಾನನಿಗೆ ಅಪಚಾರವೆಸಗಿದಂತೆ ಆಗುವುದೆಂಬ ಉದ್ದೇಶದಿಂದ ಶಾಕ್ಯರಿಗೆ ಹಾನಿ ಮಾಡಬೇಡವೆಂದು ಮಗನಿಗೆ ಹೇಳಿದ.

ವಿರೂಢವನು ತಂದೆಗೆ ಎದುರುತಿರಿಗಿಬಿದ್ದು ಕೋಸಲ ರಾಜ್ಯದ ಸಿಂಹಾಸನವನ್ನು ಅಲಂಕರಿಸಿದ. ತಾನು ರಾಜನಾದಕೂಡಲೇ ಮೊದಲು ಶಾಕ್ಯವಂಶವನ್ನು ನಾಶಮಾಡಬೇಕೆಂದು ಸಂಕಲ್ಪ ಮಾಡಿಕೊಂಡ. ತಾಯಿ ವಾಸವಕ್ಷತ್ರಿಯ ಕಣ್ಣೀರುಮಿಡಿಯುತ್ತಾ ಅನೇಕರೀತಿ ಕೇಳಿಕೊಂಡಳು. ಪ್ರಾರ್ಥಿಸಿದಳು. ಆದರೆ ವಿರೂಢವನ ಮನಸ್ಸು ಬದಲಾಯಿಸಲಿಲ್ಲ.

ಅಪಾರ ಸೈನ್ಯದೊಂದಿಗೆ ಹೋಗಿ ಶಾಕ್ಯರ ಮೇಲೆ ಬಿದ್ದ. ತುಸವಾದರೂ ಕರುಣೆ, ಮರುಕಗಳಿಲ್ಲದೆ, ವಿರೂಢವನು ಶಾಕ್ಯರೆಲ್ಲರನ್ನು ಕತ್ತರಿಸಿ ರಕ್ತದ ಕೋಡಿಯನ್ನು ಹರಿಸಿದ. ಆ ರಕ್ತದಿಂದ ತಾನು ಶಾಕ್ಯರಾಜ್ಯದಲ್ಲಿ ಹಿಂದೆ ಕುಳಿತಿದ್ದ ಸ್ಥಳವನ್ನೆಲ್ಲಾ ತೊಳೆಸಿದ. ಈ ರೀತಿ ಆತನ ಹಗೆ ತೀರಿತು. ಶಾಕ್ಯವಂಶವು ನಾಶವಾಯಿತು.





# ವಾರ್ತೆಗಳು-ವಿಶೇಷಗಳು

ಬೆಟ್ಟಹತ್ತುವ ವಿದ್ಯೆಯನ್ನು ಕಲಿಸಿಕೊಡಲಿಕ್ಕೆ ಒಂದು ಶಾಲೆಯನ್ನು ದಾರ್ಜಿಲಿಂಗ್‌ದಲ್ಲಿ ಬಹು ಬೇಗದಲ್ಲಿಯೇ ಪ್ರಾರಂಭಿಸಲ್ಲಿದ್ದಾರಂತೆ. ಗೌರೀಶಂಕರ ವಿಜಯಿಗಳೆಂದು ಕೀರ್ತಿ ಪಡೆದ ತೇನಸಿಂಗರೇ ಈ ಶಾಲೆಗೆ ಮುಖ್ಯ ಅಧ್ಯಾಪಕರಾಗುತ್ತಾರೆ.

* * *

ಮಧ್ಯಭಾರತಕ್ಕೆ ಸೇರಿದ 'ಬಿರ್ಲಿಂಗ್' ಗ್ರಾಮದಲ್ಲಿ ಕೆಲವು ವಿದ್ಯಾರ್ಥಿಗಳು ಸ್ವಯಂ ಕೃಷಿ, ಸ್ವತಂತ್ರ ಜೀವನ ಎಂಬ ಸೂತ್ರವನ್ನು ಅವಲಂಬಿಸಲು ಪ್ರಯತ್ನಪಡುತ್ತಿದ್ದಾರೆ. ವಿದ್ಯಾರ್ಥಿಗಳೇ ತಮ್ಮ ಪಾಠಶಾಲೆಗಾಗಿ ಒಂದು ಕುಟೀರವನ್ನು ನಿರ್ಮಿಸಿಕೊಂಡರು. ಗ್ರಾಮಸ್ಥರ ಸಹಾಯದಿಂದ ಅವರೇ ತಮ್ಮ ವಸತಿ ಗೃಹಗಳನ್ನೂ ನಿರ್ಮಿಸಿಕೊಂಡರು. ಅಕ್ಕಪಕ್ಕದ ಗ್ರಾಮುಗಳವರೂ ಅವರಿಗೆ ತಂಬಾ ಸಹಕಾರ ನೀಡುತ್ತಾರೆ. ಅವರಿಗೆ ಬೇಕಾದ ಹಲಗೆ, ಬಳಪ, ಪುಸ್ತಕಗಳೊಂದಿಗೆ ಉಪಾಧ್ಯಾಯರನ್ನು ಕೂಡಾ ಕಮ್ಯೂನಿಟೀ ಪ್ರಾಜೆಕ್ಟ್ ಕಾರ್ಯಕರ್ತರು ಕಳುಹಿಸಿದರು.

* * *

ನ್ಯೂಢಿಲ್ಲಿಯಲ್ಲಿ ಮಕ್ಕಳ ಚಿತ್ರ ನಿರ್ಮಾಣಕ್ಕಾಗಿ ಒಂದು ಸಂಘವು ಸ್ಥಾಪಿಸಲ್ಪಟ್ಟಿದೆ. "ಸಂಸ್ಕೃತಿ ಪ್ರಚಾರಕ ಚಿತ್ರಗಳ ಪ್ರದರ್ಶನ ಸಂಘ" ಎಂದು ಇದರ ಹೆಸರು. ಈ ಸಂಘದವರು ಜೆಕೊಸ್ಲೋವಾಕಿಯಾದ ಬೊಂಬೆಯಾಟಕ್ಕೆ ಸಂಬಂಧಿಸಿದ ಒಂದು ಚಿತ್ರವನ್ನು ಭಾರತ ಪ್ರಧಾನಿಗಳಾದ ಪಂಡಿತ ಜವಹರಲಾಲ ನೆಹರೂರ ಮುಂದೆ ಪ್ರದರ್ಶಿಸಿದರು. ಕೆಲವು ಮಕ್ಕಳೊಂದಿಗೆ ನೆಹರೂ ಆ ಚಿತ್ರವನ್ನು ನೋಡಿ ಈ ಸಂಘವನ್ನು ಪ್ರತಿ ಭಾರತೀಯರೂ ಪ್ರೋತ್ಸಾಹಿಸುವುದು ಅವಶ್ಯವೆಂದರು. ಮತ್ತೂ ಅವರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಮಾಡಿದರು. "ಹೆಚ್ಚಾದರೆ ನಾನು ವರ್ಷಕ್ಕೆರಡು ಸಿನಿಮಾ ನೋಡುವೆನು. ಸಾಮಾನ್ಯ ಅಗ್ಗದ ಚಿತ್ರಗಳು ಮಕ್ಕಳಿಗೆ ತಕ್ಕುವಾಗಿಲ್ಲವೆಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ. ವಿದೇಶಗಳಲ್ಲಿ ಮಕ್ಕಳ ಅಭಿರುಚಿಗಳ ದೃಷ್ಟಿಯಿಂದ ಅವರಿಗಾಗಿಯೇ ಪ್ರತ್ಯೇಕ ಚಿತ್ರ ತಯಾರಿಸುವುದರ ಮರ್ಮವನ್ನು ನಾವು ಅರಿತುಕೊಳ್ಳಬೇಕು."

* * *

ಪಂಡಿತ ಜವಾಹರಲಾಲ ನೆಹರೂರವರ ಜೀವನ ಚರಿತ್ರೆಯನ್ನು, ಬೊಂಬಾಯಿಯ 'ಟ್ಯಾಮ್ಸ್ ಆಫ್ ಇಂಡಿಯಾ' ಪತ್ರಿಕೆಯ ಸಂಪಾದಕರಾದ ಶ್ರೀ ಫ್ರಾಂಕ್ ಮೋರೇರವರು ಬರೆಯುತ್ತಾರೆ. ಅದನ್ನು ಅಮೇರಿಕೆಯ ಪ್ರಕಟನಾ ಕಂಪೆನಿಯೊಂದು ಪ್ರಕಟಿಸುತ್ತದೆ.

ಇಸ್ರಾಯಲೀ ಬಾಲಕರಿಗೆ ಪ್ರಧಾನಿ ಪಂಡಿತ ನೆಹರೂ ಸುಮಾರು ಒಂದು ವರ್ಷ ಪ್ರಾಯ ವಿರುವ ಹುಲಿಮರಿಯನ್ನು ಕಾಣಿಕೆಯಾಗಿ ಸಮರ್ಪಿಸಿದ್ದಾರೆ. ಇದರ ಹೆಸರು 'ವಿಂಧ್ಯಾವನಿ' ವಿಂಧ್ಯಪ್ರದೇಶದ ಅಡವಿಗಳಲ್ಲಿ ಇದು ದೊರಕಿತ್ತು.

* * *

ಸರಕಾರದ ನಿಯಮಾವಳಿಗೆ ಅನುಸರಿಸಿ ಕೊಂಡಂತಹ ಒಂದು ಆಯುರ್ವೇದ ಕಾಲೇಜನ್ನು ಇತ್ತೀಚೆಗೆ ವಿಜಾಪುರದ ವೈದ್ಯರುಗಳು ಅಲ್ಲಿ ಪ್ರಾರಂಭಿಸಿಧ್ದಾರೆ.

* * *

ಬೊಂಬಾಯಿ ರಾಷ್ಟ್ರದಲ್ಲಿ ಬೇಸಾಯಗಾರರ ಕೆಲಸಗಳಬಗ್ಗೆ ತಂತಮ್ಮ ಆಯ ವ್ಯಯಗಳ ವಿವರಣೆಯ ಪೂರ್ವಕ ಲೆಕ್ಕವಿಡುವ ರೈತರಿಗೆ ೧೯೫೪-೫೫ ನೇ ವರ್ಷದ ಸಲವಾಗಿ ಬಹುಮಾನ ಕೊಡಲು ಬೊಂಬಾಯಿ ಸರಕಾರವು ನಿರ್ಧರಿಸಿದೆ. ೩೦೦, ೨೦೦, ೧೦೦ ರೂಪಾಯಿಗಳ ಮೂರು ಮೂರು ಬಹುಮಾನಗಳನ್ನು ಗುಜರಾತ, ಕರ್ಣಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಕೊಡುವವರಿದ್ದಾರೆ.

* * *

ದಕ್ಷಿಣ ಕನ್ನಡ ಜಿಲ್ಲೆಯ ಪ್ರಸಿದ್ಧವಾದ ಮಲ್ಪೆ ಬಂದರವನ್ನು ದೊಡ್ಡದೊಂದು ಮೀನು ಹಿಡಿಯುವ ಕೇಂದ್ರವನ್ನಾಗಿ ಮಾಡಲು ಮದರಾಸು ಸರಕಾರವು ಏರ್ಪಾಡು ಮಾಡಿದೆ.

* * *

೧೯೫೨ನೇ ಸೆಪ್ಟೆಂಬರಿನಲ್ಲಿ ಪ್ರಕಟಿಸಲ್ಪಟ್ಟದ್ದು, ಹಿಂದಿಯ ಅಥವಾ ಇತರ ಭಾಷೆಗಳಿಂದ ಹಿಂದಿಗೆ ಭಾಷಾಂತರವಾದ ಗ್ರಂಥಗಳಿಗೆ ಬಹುಮಾನ ಕೊಡುವ, ಭಾರತ ಸರ್ಕಾರದ ಯೋಜನೆಯಂತೆ, ಮಕ್ಕಳ ಸಾಹಿತ್ಯದಲ್ಲಿ ಶ್ರೀ ರಘುವೀರದಯಾಳಮಿಶ್ರ ಎಂಬವರಿಗೆ, ಅವರ 'ಹೈದರ್ ಆಲಿ' ಎಂಬ ಪುಸ್ತಕಕ್ಕೆ ೧೦೦೦ ರೂಪಾಯಿಗಳ ಬಹುಮಾನ ದೊರೆತಿದೆ.

* * *

ಬೆಂಗಕಾಕ್‌ನ ಆಹಾರ ಮತ್ತು ಕೃಷಿ ಸಂಸ್ಥೆಯ ಅಕ್ಕಿಪರೀಕ್ಷಕ ತಜ್ಞರಾದ ಶ್ರೀ ಐ. ಕೆ. ರಾಮಯ್ಯನವರು ಪ್ರಪಂಚದಲ್ಲಿ ಒಟ್ಟು ೧೦ ಸಾವಿರ ವಿಧದ ಅಕ್ಕಿ ಇದೆಯೆಂದೂ, ಮದರಾಸು ಮತ್ತು ಒರಿಸ್ಸಾ ಪ್ರಾಂತಗಳಲ್ಲಿ ಅಕ್ಕಿ ಬೆಳೆಯ ವೈವಿಧ್ಯತೆ ಹೆಚ್ಚಾಗಿರುವುದೆಂದೂ ಅವರು ತಿಳಿಸುತ್ತಾರೆ.

* * *

ರಾಜಾಸ್ಥಾನದ ಜಸಲಮೀರ್, ಭವಾಲ್‌ಪುರಗಳ ಬದಿಯಲ್ಲಿ ೪೦ ಮೈಲು ಉದ್ದ ೫ ಮೈಲು ಅಗಲವಿರುವ ಬೆಂಗಾಡು ಪ್ರದೇಶವು ಈಗ ಹಸುರಾಗಿದೆ. ಇದು ೪೦೦ ಮೈಲು ಉದ್ದ ೫ ಮೈಲು ಅಗಲ ವಿರುವ "ಥಾರ್" ಮರುಭೂಮಿಯ ಒಂದು ಭಾಗ. ಮರಳುಗಾಡನ್ನು ಅರಣ್ಯವನ್ನಾಗಿಸಲಿಕ್ಕಾಗಿ ಜೋಧಪುರ ಕೇಂದ್ರದ ಸಂಶೋಧನ ಕಾರ್ಯಾಲಯವು ಕಾರ್ಯರಂಗಕ್ಕಿಳಿದಿದೆ. ಇವರು ವಿವಿಧ ಮಣ್ಣು ಮತ್ತು ಪೈರುಗಳೊಂದಿಗೆ ಸಾಧನೆ ಸಾಗಿಸುತ್ತ ಮರಳುಗಾಡನ್ನು ಗೆಲ್ಲುವ ಕಾರ್ಯದಲ್ಲಿ ತೊಡಗಿದ್ದಾರೆ.

* * *

ವಿದ್ಯಾರ್ಥಿಗಳಿಗೆ ಹುರುಪು, ಆತ್ಮವಿಶ್ವಾಸ, ಮತ್ತು ಸಾಮಾನ್ಯ ಜ್ಞಾನವು ಬಹುಳವಾಗಿ ದೊರೆಯುವಂತೆ ಬೊಂಬಾಯಿ ಸರಕಾರವು ತನ್ನ ಶಿಕ್ಷಣ ಕ್ರಮದಲ್ಲಿ ಸುಧಾರಣೆ ಮಾಡಿರುತ್ತದೆ.

# ಚಿತ್ರ ಕಥೆ



ಆ ದಿನ ಆದಿತ್ಯವಾರ. ಕಿಟ್ಟೂ ಗೋಪೂ ತಿರುಗಾಡಲಿಕ್ಕೆ ಹೊರಟರು. ಹೋಗಿ ಒಂದೆಡೆ ಕುಳಿತರು. ಕಿಟ್ಟುವಿನ ಕೈಯಲ್ಲಿ ಒಂದು ರೊಟ್ಟಿ ಇತ್ತು: "ಗೋಪು, ಈಗ ಒಂದು ಪಂದ್ಯ ಕಟ್ಟುವ. ಓ ಅಲ್ಲಿ ಕಾಣುವ ಮೈಲು ಕಲ್ಲಿನ ತುದಿಯಲ್ಲಿ ಈ ರೊಟ್ಟಿ ಇಡುವ. ಆ ಮರದ ಕಡೆಯಿಂದ ಅಲ್ಲಿಗೆ ಓಡುವ. ಯಾರು ಮೊದಲು ಮುಟ್ಟುತ್ತಾರೋ ಅವರಿಗೇ ರೊಟ್ಟಿ" ಅಂದ ಕಿಟ್ಟು. "ಸರಿ" ಅಂದ ಗೋಪು.




ಹಾಗೇ ಮಾಡಿದರು. ಮರದ ಬುಡದಿಂದ ಓಡಲಿಕ್ಕೂ ತೊಡಗಿದರು. ಆಗ ಅವರ ಸಾಕು ನಾಯಿ 'ಟೈಗರಿಗೆ' ಇವರ ಪಂದ್ಯವೇನು ಗೊತ್ತು? ಹೊಟ್ಟೆಯ ಹಸಿವೆಯೊಂದೇ ಅದಕ್ಕೆ ಗೊತ್ತು. ಇವರ ಓಟನೋಡಿ ಅದೂ ಓಡಿತು. ಕೇಳಬೇಕೇ ಜಯ ಯಾರಿಗೆಂದು? ಅದರ ಪುಣ್ಯ! 'ಇಬ್ಬರ ನ್ಯಾಯ ಮೂರನೇಯವನ ಆದಾಯ'ತಾನೆ? ಪಾಪ, ಕಿಟ್ಟೂ, ಗೋಪೂ....!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by C. P. Patel



ಬಹುಮಾನ
ಪಡೆದ ಶೀರ್ಷಿಕೆ

ಒಡಹುಟ್ಟು

ಕಳಿಸಿದವರು:
ಕೆ. ರಾಮರಾವ್

